॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ಶ್ರೀಪಾದರಾಯರ

ಮತ್ತು

# ಶ್ರೀವ್ಯಾಸರಾಯರ ಕೀರ್ತನೆಗಳು.

(ಸುಳಾದಿಗಳು) —

ಪ್ರಥಮಾವೃತ್ತಿ

ಈ ಗ್ರಂಥವು

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

1924.

ಬೆಲೆ: ೮ ಆಣೆ.

# ಪ್ರಸ್ತಾವನೆ.

ಪುರುಷಾರ್ಥ ಶ್ರೇಷ್ಠವಾದ ಮೋಕ್ಷಸ್ಥಾನಕ್ಕೆ ಕರ್ಮ-ಜ್ಞಾನ-ಭಕ್ತಿ ಮಾರ್ಗಗಳೆಂಬ ಹಲವು ಮಾರ್ಗಗಳಿದ್ದರೂ ಅನೇಕ ವಿಘ್ನಪೀಡಿತವಾದ ಈ ಕಲಿಯುಗದಲ್ಲಿ ನಿರ್ವಿಘ್ನದಿಂದ ಯಜ್ಞಾದಿ ಕರ್ಮಗಳನ್ನೂ ಶಾಸ್ತ್ರೀಯಜ್ಞಾನವನ್ನೂ ಸಂಪಾದಿಸಲು ಅಶಕ್ತರಾಗಿ ಬಳಲುವ ಸಂಸಾರಿಗಳನ್ನುದ್ಧರಿಸಲು, ಪುರಂದರದಾಸಾದಿ ಮಹನೀಯರನೇಕರು ಅವತರಿಸಿ, ಭಕ್ತಿಮಾರ್ಗವನ್ನು ಕೀರ್ತನದ್ವಾರಾ ಸ್ಥಾಪಿಸಿರುವರೆಂಬುದು ಪ್ರಸಿದ್ಧ ವಿಷಯವಷ್ಟೆ.

ಅಂತಹ ಪುರಂದರದಾಸಾದಿಗಳಿಗೂ ಜ್ಞಾನೋಪದೇಶಕರಾದ **ಶ್ರೀವ್ಯಾಸರಾಯ** ಮಹಾಮುನಿಗಳು ಪ್ರಹ್ಲಾದರಾಯರ ಅಂಶರಾಗಿ ಭೂಮಿಯಲ್ಲವತರಿಸಿ, ಶ್ರೀಬ್ರಹ್ಮಣ್ಯತೀರ್ಥರಿಂದ ಸನ್ಯಾಸ ಪಡೆದು, **ಶ್ರೀಪಾದರಾಯ** ಯತಿವರರಲ್ಲಿ ವಿದ್ಯಾವ್ಯಾಸಂಗ ಮಾಡಿ, ನ್ಯಾಯಾಮೃತತರಂಗಿಣೀ ತರ್ಕತಾಂಡವ ಚಂದ್ರಿಕಾ ಮೊದಲಾದ ಸಂಸ್ಕೃತ ವೇದಾಂತವಾದಗ್ರಂಥಗಳನ್ನು ರಚಿಸಿ, ಜ್ಞಾನಮಾರ್ಗ ಪ್ರಕಾಶಕರಾಗಿ, **ಚಂದ್ರಿಕಾಚಾರ್ಯ**ರೆಂಬ ಪ್ರಖ್ಯಾತಿಯನ್ನು ಪಡೆದುದು ಮಾತ್ರವಲ್ಲದೆ, ಶ್ರೀಪಾದರಾಯರಿಂದಲೇ '**ಶ್ರೀಕೃಷ್ಣ**' ಎಂಬ ಅಂಕಿತ ಪಡೆದು ಪಾಮರ ಜನರುದ್ಧಾರಕ್ಕಾಗಿ ಅನೇಕ ಹರಿಕೀರ್ತನಗಳನ್ನೂ ಸುಳಾದಿಗಳನ್ನೂ ನಿರ್ಮಿಸಿದ್ದಾರೆ. ಈ ಮಹನೀಯರಿಗೆ ವ್ಯಾಸಕೂಟದಲ್ಲಿ ಪ್ರೇಮವಿರುವಷ್ಟೇ ದಾಸಕೂಟದಲ್ಲೂ ಪ್ರೀತಿಯಿದ್ದಿತೆಂಬುದು ಇವರ ಹರಿಕೀರ್ತನೆಗಳಿಂದಲೇ ತಿಳಿಯಬಹುದು.

ಶಾ. ಶಕ ೧೫೨೨ನೇ ಕ್ರಿ. ಶಕ ೧೬೦೦ನೇ ಶಾರ್ವರಿ ಫಾಲ್ಗುನ ಕೃಷ್ಣ ತೃತೀಯೆಯಲ್ಲಿ ಶ್ರೀವಾದಿರಾಜರು ಪರಂಧಾಮವನ್ನಲಂಕರಿಸಿದರು. ಇದರ ಮರುದಿನ ಚತುರ್ಥೀ ತಿಥಿಯಲ್ಲಿ ಶ್ರೀವ್ಯಾಸರಾಯರು ವೈಕುಂಠ

ಯಾತ್ರೆ ಮಾಡಿದರೆಂಬುದು ಪ್ರಸಿದ್ಧವಾದುದರಿಂದ ಈ ಮಹನೀಯರೂ ಮತ್ತು ಇವರ ವಿದ್ಯಾಗುರುಗಳಾದ ಶ್ರೀಪಾದರಾಯರೂ ಕ್ರಿ. ಶಕ 15ನೇ ಶತಮಾನದಲ್ಲಿದ್ದರೆಂದೂಹಿಸಬಹುದು.

ಮಹಾನುಭಾವರಾದ ಶ್ರೀಪಾದರಾಯರು ವ್ಯಾಸಕೂಟದಲ್ಲಿ ಅತಿ ಶ್ರೇಷ್ಠರೆಂದು ಕೀರ್ತಿಶಾಲಿಗಳಾಗಿ ಈ ಕನ್ನಡ ನಾಡಿನಲ್ಲಿ ಭಕ್ತಿಮಾರ್ಗದ ಗುರುತನ್ನೇ ಅರಿಯದ ಸಾಮಾನ್ಯಜನರ ಕ್ಷೇಮಕ್ಕಾಗಿ ವೈಷ್ಣವ ಸಂಪ್ರದಾಯದಲ್ಲಿಯೂ ಮೊತ್ತಮೊದಲು ದಾಸಕೂಟವನ್ನು ಸ್ಥಾಪಿಸಬೇಕೆಂದು ನಿರ್ಣಯಿಸಿ, ಭಗವದಪರೋಕ್ಷಜ್ಞಾನಿಗಳಾದುದರಿಂದ ಶ್ರೀಪರಮಾತ್ಮನ ಅನುಗ್ರಹದಿಂದಲೇ **'ಶ್ರೀರಂಗವಿಠಲ'** ಎಂಬ ಅಂಕಿತ ಪಡೆದು ಅನೇಕ ಹರಿಕೀರ್ತನೆ, ಉಗಾಭೋಗ, ಸುಳಾದಿ ಮೊದಲಾದ ಗೀತಗಳನ್ನು ರಚಿಸಿ ದೀನರನ್ನುದ್ಧರಿಸಿದರು. ಈ ಕೀರ್ತನಬೀಜವು ಇವರಲ್ಲಂಕುರಿಸಿ, ಶ್ರೀವ್ಯಾಸರಾಯರಲ್ಲಿ ಪುಷ್ಪಿತವಾಗಿ ಪುರಂದರದಾಸಾದಿಗಳಲ್ಲಿ ಫಲಿಸಿತು.

ದಾಸಕೂಟದ ಆದಿಪುರುಷರೆನಿಸಿದ ಈ ಗುರುಶಿಷ್ಯರಾದ ಮಹಾತ್ಮರ ವಚನಾಮೃತಗಳನ್ನು ಶ್ರಮಪಟ್ಟು ಯಥಾಶಕ್ತಿ ಸಂಗ್ರಹಿಸಿ **'ಶ್ರೀಪಾದರಾಯರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು, ಸುಳಾದಿಗಳು'** ಎಂಬ ಈ ಚಿಕ್ಕ ಗ್ರಂಥವನ್ನು ಪ್ರಕಟಿಸಿರುತ್ತೇನೆ. ಈ ಗ್ರಂಥಶೋಧನದಲ್ಲಿ ಶ್ರಮಪಟ್ಟ ವೇ. ಮೂ. ಯು. ವಾಸುದೇವಾಚಾರ್ಯರಿಗೆ ನನ್ನ ಧನ್ಯವಾದಗಳು. ಇನ್ನು ಮುಂದೆ ಈ ಮಹನೀಯರ ಕೀರ್ತನೆ ಸಂಗ್ರಹವುಳ್ಳವರು ಅದನ್ನು ದಯವಿಟ್ಟು ಕಳುಹಿಸಿದರೆ ಮುಂದಿನ ಮುದ್ರಣದಲ್ಲಿ ಪ್ರಕಟಿಸುವೆನು.

ಉಡುಪಿ,
ತಾ. 4–12–'24.

ಪಾವಂಜೆ ಗುರುರಾವ್,
ಪ್ರಕಾಶಕ,
ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ, **ಉಡುಪಿ.**

# ಅನುಕ್ರಮಣಿಕೆ.

## ಶ್ರೀಪಾದರಾಯರ ಕೀರ್ತನೆಗಳು.

## ಶ್ರೀವ್ಯಾಸರಾಯರ ಕೀರ್ತನೆಗಳು.

## ಶ್ರೀವ್ಯಾಸರಾಯರ ಸುಳಾದಿಗಳು.



**ಸಂಪೂರ್ಣವು.**



॥ ಶ್ರೀಃ ॥

॥ ಶ್ರೀಪಾಂಡುರಂಗವಿಟ್ಠಲಾಯ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಶ್ರೀಪಾದರಾಯರ ಕೀರ್ತನೆಗಳು.

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ ॥



## ೧. ರಾಗ ನಾಟಿ, ಆದಿತಾಳ.

ವಂದಿಪೆ ನಿನಗೆ ಗಣನಾಥ । ಮೊದ । ಲೊಂದಿಪೆ ನಿನಗೆ ಗಣನಾಥ ॥ ಪಲ್ಲ ॥ ಬಾದ ವಿಘ್ನ ಕಳೆ ಗಣನಾಥ ॥ ॥ ಅನುಪಲ್ಲ ॥ ಹಿಂದೆ ರಾವಣನು ಮದ । ದಿಂದ ನಿನ್ನ ಪೂಜಿಸದೆ । ಸಂದ ರಣದಲಿ ಗಣನಾಥ ॥ ೧ ॥ ಮಾಧವ ನಾಜ್ಞಾದಿ ಧರ್ಮ । ರಾಜ ನಿನ್ನ ಪೂಜಿಸಲು । ಸಾಧಿಸಿದ ರಾಜ್ಯ ಗಣನಾಥ ॥ ೨ ॥ ಮಂಗಳ ಮೂರುತಿ ಗುರು । ರಂಗವಿಟ್ಠಲನ ಪಾದ । ಭೃಂಗನೆ ಪಾಲಿಸೊ ಗಣನಾಥ ॥ ೩ ॥ ಶ್ರೀಃ ॥

## ೨. ರಾಗ ತೋಡಿ, ರೂಪಕತಾಳ.

ಕಂಗಳಿದೇತಕೋ । ಕಸ್ತೂರಿ ರಂಗನ ನೋಡದ । ಕಾವೇರಿ ರಂಗನ ನೋಡದ । ಜನರ ॥ ಪಲ್ಲ ॥ ಜಗಂಗಳೊಳಗೆ । ಮಂಗಳ ಮೂರುತಿ ।

ರಂಗನ ಶ್ರೀಪಾ । ದಂಗಳ ನೋಡದ ॥ ಅನುಪಲ್ಲ ॥ ಎಂದಿಗಾದರೊಮ್ಮೆ ಜನರು । ಬಂದು ಭೂಮಿಯಲ್ಲಿ ನಿಂದು ॥ ಚಂದ್ರ ಪುಷ್ಕರಣಿಯಲ್ಲಿ ಮಿಂದಾ । ನಂದದಿಂದ ರಂಗನ ನೋಡದ ॥ ೧ ॥ ಹರಿಪಾದೋದಕ ಸಮ ಕಾವೇರಿ । ವಿರಜಾನದಿಯ ಸ್ನಾನವ ಮಾಡಿ ॥ ಪರಮ ವೈಕುಂಠ ರಂಗ ಮಂದಿರ । ಪರವಾಸುದೇವನ ನೋಡದ ॥ ೨ ॥ ಹಾರ ಹೀರ ವೈಜಯಂತಿ । ತೋರಮುತ್ತಿನ ಹಾರ ಪದಕ ॥ ತೇರನೇರಿ ಬೀದಿಲಿ ಬರುವ । ರಂಗವಿಠಲರಾಯನ ನೋಡದ ॥ ೩ ॥ ಶ್ರೀಃ ॥

## ೩. ರಾಗ ಕೇದಾರಗೌಳ, ಆದಿತಾಳ.

ಮೋಸ ಹೋದೆನಲ್ಲ । ಸಕಲವು । ವಾಸುದೇವ ಬಲ್ಲ ॥ ಪಲ್ಲ ॥ ಭಾಸುರಾಂಗ ಶ್ರೀವಾಸುಕಿಶಯನನ । ಸಾಸಿರ ನಾಮವ ಲೇಸಾಗಿ ಪಠಿಸದೆ ॥ ॥ ಅನುಪಲ್ಲ ॥ ದುಷ್ಟ ಜನರ ಕೂಡಿ । ನಾನತಿ । ಭ್ರಷ್ಟನಾದೆ ನೋಡಿ ॥ ದೃಷ್ಟ್ಯಗೋಚರ ಮುರ ಮುಷ್ಟಿ ವೈರಿಯ । ದೃಷ್ಟಿಯಿಂದ ನಾ ದೃಷ್ಟಿಸಿ ನೋಡದೆ ॥ ೧ ॥ ಕಾಯವು ಸ್ಥಿರವಲ್ಲ । ಎನ್ನೊಳು । ಮಾಯೆ ತುಂಬಿತಲ್ಲ ॥ ಪ್ರಾಯ ಮದದಿ ಪರಸ್ತ್ರೀಯರ ಕೂಡ್ಯಾಡಿ । ಕಾಯಜ ಜನಕನ ಗಾಯನ ಮಾಡದೆ ॥ ೨ ॥ ಕಂಗಳಿಂದಲೆನೊಡೊ । ದೇವ ಎ । ನ್ನಂಗ ಸಂಗವ ಮಾಡೋ ॥ ಮಂಗಳ ಮೂರುತಿ ಶ್ರೀರಂಗವಿಠಲ ಮುಂ । ದಂಗ ಬಾರದಂತೆ ನೀ ದಯಮಾಡೋ ॥ ೩ ॥ ಶ್ರೀಃ ॥

## ೪. ರಾಗ ಸಾವೇರಿ, ಆದಿತಾಳ.

ಚಿತ್ತಜನಯ್ಯನ ಚಿಂತಿಸು ಮನವೆ । ನೀ । ಮತ್ತನಾಗಿರ ಬೇಡವೊ ॥ ॥ ಪಲ್ಲ ॥ ಕಾಲನ ಬಂಟರು ನೂಲು ಹಗ್ಗವ ತಂದು । ಕಾಲು ಕೈಗಳ ಕಟ್ಟಿ ಮೇಲೆ ಕುಟ್ಟಿ ॥ ಕಾಲಾ ಸೂತ್ರದಲಿದ್ದ ಶೂಲದಿಂದೆಳವಾಗ । ಪಾಲಿಸುವರಾರಯ್ಯ ಜಾಲವನು ಮಾಡದೆ ॥ ೧ ॥ ದಂಡಧರನ ಭಟರಾ ಖಂಡ ಕೋಪದಿ ಬಂದು । ಕೆಂಡದ ಒಳಗೆಳದು ಕೊಂಡೊಯ್ದು ನಿನ್ನ ॥ ಖಂಡ ಖಂಡವ ಕಿತ್ತು ಕುಂಡದೊಳಿಡುವಾಗ । ಹೆಂಡಿರೊ ಮಕ್ಕಳೊ ಕಂಡು

ಬಿಡಿಸುವರಾರು ॥ ೨ ॥ ಅಂಗುಟಿಗೆ ಬಾಣಂಗಳೇರಿಸಿ ಸಿನ್ನೆರಡು । ಕಂಗಳಿಗೆ ಸೀಸಂಗಳ್ಹೊಯ್ಯಲು ॥ ತಂಗಿ ಅಕ್ಕ ಬಂದು ಭಂಗವ ಬಿಡಿಸುವರೆ । ಅಂಗವು ಸ್ಥಿರವಲ್ಲ ರಂಗ ವಿಠ್ಠಲ ಬಲ್ಲ ॥ ೩ ॥ ಶ್ರೀಃ ॥

## ೫. ರಾಗ ಸಾರಂಗ, ಝುಂಪೆತಾಳ.

ಭೂಷಣಕೆ ಭೂಷಣ ಇದು ಭೂಷಣ ॥ ಶೇಷಗಿರಿವಾಸ ಶ್ರೀವರ ವೆಂಕಟೇಶ ॥ ಪಲ್ಲ ॥ ನಾಲಿಗೆಗೆ ಭೂಷಣ ನಾರಾಯಣನಾಮ । ಕಾಲಿಗೆ ಭೂಷಣ ಹರಿಯಾತ್ರೆಯೂ ॥ ಆಲಯಕೆ ಭೂಷಣ ತುಲಸಿ ವೃಂದಾವನವಿ । ಶಾಲಕರ್ಣಕೆ ಭೂಷಣ ವಿಷ್ಣುಕಥೆಯೂ ॥ ೧ ॥ ದಾನವೇ ಭೂಷಣ ಎರಡು ಹಸ್ತಂಗಳಿಗೆ । ಮಾನವೇ ಭೂಷಣ ಮಾನವರಿಗೆ ॥ ಜ್ಞಾನವೇ ಭೂಷಣ ಮುನಿಯೋಗಿವರಗಳಿಗೆ । ಮಾನಿನಿಗೆ ಭೂಷಣ ಪತಿಭಕ್ತಿಯೂ ॥ ೨ ॥ ರಂಗ ನಿನ್ನ ನೋಡುವದೆ ಕಂಗಳಿಗೆ ಭೂಷಣ । ಮಂಗಳಾಂಗನ ಮಣಿಯೆ ಶಿರ ಭೂಷಣ ॥ ಶೃಂಗಾರ ತುಲಸಿಮಣಿ ಕೊರಳಿಗೆ ಭೂಷಣ । ರಂಗ ವಿಠ್ಠಲ ನಿನ್ನ ನಾಮ ಅತಿ ಭೂಷಣ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬. ರಾಗ ಜುಂಜೋಟಿ, ಆದಿತಾಳ.

ಸುಮ್ಮನೆ ವೈಷ್ಣವನೆಂಬಿರಿ । ಪರ । ಬೊಮ್ಮ ಸುಜ್ಞಾನವನರಿಯದ ಮನುಜನ ॥ ಪಲ್ಲ ॥ ಮುಖವ ತೊಳೆದು ನಾಮವನಿಟ್ಟೆನಲ್ಲದೆ । ಸುಖತೀರ್ಥಶಾಸ್ತ್ರವನೋದಿದೆನೆ ॥ ಸುಖಕೆ ಶೃಂಗಾರಮಾಲೆ ಹಾಕಿದೆನಲ್ಲದೆ । ಭಕುತಿ ರಸದಲ್ಲಿ ಮುಳುಗಿದೆನೇನಯ್ಯ ॥ ೧ ॥ ಊರು ಮಾತುಗಳಾಡಿ ದಣಿದೆನಲ್ಲದೆ । ನಾರಾಯಣ ಕೃಷ್ಣ ಶರಣೆಂದೆನೆ ॥ ನಾರಿಯ ನುಡಿಕೇಳಿ ಮರುಳಾದೆನಲ್ಲದೆ । ಗುರುಹಿರಿಯರ ಮಾತ ಮನ್ನಿಸಿದೆನೇನಯ್ಯ ॥ ೨ ॥ ಜಗತು ಸತ್ಯವೆಂದು ಪಂಚಭೇದವ ತಿಳಿದು । ರಾಗ ದ್ವೇಷಗಳೊಂಭತ್ತು ವರ್ಜಿಸಿ ॥ ಭಾಗವತದಲ್ಲಿ ಶ್ರವಣ ಮನನದಿಂದ । ನಿಗಮಗೋಚರನೆಂದು ತಿಳಿದಿಹೆನೇನಯ್ಯ ॥ ೩ ॥ ನರೋತ್ತಮಗಧಿಕ ಗಂಧರ್ವರಿಂದಧಿಕ । ಸುರ ಇಂದ್ರಗಧಿಕ ಸಾಂಬಗಧಿಕ ॥ ವಿರಿಂಚನಿಗಧಿಕ ಸಿರಿಗಧಿಕ । ಹರಿ

ಸರ್ವೋತ್ತಮನೆಂದು ತಿಳಿಯಿಸೇನಯ್ಯ ॥ ೪ ॥ ಗಂಗೆಯೊಳ್ ವೈ ಮಣ್ಣ ತೊಳೆದೆಸಲ್ಲದೆ । ಓಂಗವೆ ಸ್ನಾನವ ಮಾಡಿದೆನೆ ॥ ರಂಗವಿಠಲನ್ನ ನಿಜವಾದ ದಾಸರ । ಸಂಗದೊಳಗೆ ಓಲಾಡುತಿದ್ದೆನೇನಯ್ಯ ॥ ೫ ॥

## ೭. ರಾಗ ಸಾದನಾಮಕ್ರಿಯೆ, ಅಟತಾಳ.

ಮರುದಂಶನ ಮತ ಪಿಡಿಯದೆ। ಇಹ । ಪರಗಳಲಿ ಸುಖವಿಲ್ಲವೆಂದು । ಅರಿತು ವಿವೇಕದಿ ಮರೆಯದೆ । ನಮ್ಮ । ಗುರುರಾಯರ ನಂಬಿ ಬದು ಕಿರೋ ॥ ಅನುಪಲ್ಲ ॥ ಕ್ಷೀರವ ಕರದಿಟ್ಟ ಮಾತ್ರದಿ । ಸಂ । ಸ್ಕಾರವಿಲ್ಲದೆ ಘೃತವಾಗದಂತೆ॥ ಸೂರಿ ಜನರ ಸಂಗವಿಲ್ಲದೆ। ಸಾಧು। ವೈರಾಗ್ಯವು ಸಂಭ ವಿಸದಂತೆ ॥ ೧ ॥ ಉಪದೇಶ ಲಭ್ಯವಲ್ಲದ ಮಂತ್ರ । ವೇಸು । ಜಪಿಸಲು ಫಲಂಗಳ ಕೊಡದಂತೆ ॥ ಉಪವಾಸ ವ್ರತಂಗಳಿಲ್ಲದ। ಜೀವ। ತಪಸಿಯೆನಿ ಸಿಕೊಳಲರಿಯದಂತೆ ॥ ೨ ॥ ಸಾರ ಮಧ್ವಶಾಸ್ತ್ರ ಓದದೆ। ಗುರು । ತಾರ ತಮ್ಯ ಜ್ಞಾನ ಪುಟ್ಟದಂತೆ ॥ ಶ್ರೀರಂಗ ವಿಠ್ಠಲನ ಭಜಿಸದೆ। ಮುಂದೆ । ಪರಮಗತಿ ದೊರಕಲೊಲ್ಲದಂತೆ ॥ ೩ ॥ ಶ್ರೀಃ ॥

## ೮. ರಾಗ ಪುನ್ನಾಗವರಾಳಿ, ಆದಿತಾಳ.

ಬಾರೋ ನಮ್ಮ ಮನೆಗೆ। ಗೋಪಾಲಕೃಷ್ಣ। ಬಾರೋ ನಮ್ಮ ಮನೆಗೆ॥ ॥ ಪಲ್ಲ ॥ ಮೂರ್ಜಗವೆಲ್ಲ ನಿನ್ನ । ಬೊಜ್ಜೆಯೊಳಗೆ ಇಟ್ಟ ॥ ಗೆಜ್ಜೆಯ ಕಟ್ಟಿ ತ । ಘೆಜ್ಜೆಯನಿಕ್ಕುತ ॥ ೧ ॥ ಕಸ್ತೂರಿ ತಿಲಕವು । ಶಿಸ್ತಾಗಿ ಪಣೆ ಯೊಳಿಟ್ಟ ॥ ಮಸ್ತಕದಲಿ ಪರ । ವಸ್ತುಗಳ್ಯಾಕೊ ॥ ೨ ॥ ಗೊಲ್ಲ ಬಾಲಕರನ್ನು । ನಿಲ್ಲಿಸಿ ಪೆಗಲೇರಿ ॥ ಗುಲ್ಲುಮಾಡದೆ ಮೊಸ। ರೆಲ್ಲ ಕುಡಿದ ಕೃಷ್ಣ ॥ ೩ ॥ ನಾರಿಯರು ಬಿಚ್ಚಿಟ್ಟ। ಶೀರೆಗಳೆಲ್ಲ ವೊಯ್ದು । ಸಾರಿನಿಲ್ಲದೆ ಕರ। ತಾರೆ ಶ್ರೀಕೃಷ್ಣನ ॥೪॥ ಅಂಗಳದಲ್ಲಿ ಬಲು। ಶೃಂಗಾರವಾಗಿರುವ ॥ ಮಂಗಳಮಹಿಮ ಭು । ಜಂಗಶಯನ ಕೃಷ್ಣ ॥ ೫ ॥ ನಾರಿಯರು ನಾವೆಲ್ಲ। ನೀರಿಗೆ ಹೋಗುವಾಗ॥ ದಾರಿಯಡ್ಡ ಕಟ್ಟಿ । ಬಾರೆಂದು ಕರೆದ ಸ್ವಾಮಿ ॥ ೬ ॥ ಅಂಗನೆಯರ ವ್ರತ। ಭಂಗವ ಮಾಡಿದ ॥ ರಂಗವಿಠಲ ಭವ । ಭಂಗವ ಪರಿಹರಿಸಿ ॥ ೭ ॥ ಶ್ರೀಃ ॥

## ೯. ಶ್ರೀರಾಗ, ಅಟತಾಳ.

ದಂತಗಜ ಪಂಚಾನನ । ನರ । ಹರಿಯೆ ದೇವದೇವ ಕಾಯೊ ಗೋವಿಂದ ॥ ಪಲ್ಲ ॥ ಹೆತ್ತ ಮಕ್ಕಳು ಹುಚ್ಚರಾದರೆ ತಾಯಿತಂದೆ । ಎತ್ತದೆ ನೆಲಕೆ ಬಿಡುವರೆ ಗೋವಿಂದ ॥ ೧ ॥ ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ । ನಿನ್ನನೋಲೈಸಲೇಕೋ ಗೋವಿಂದ ॥ ೨ ॥ ಹೆಸರುಳ್ಳ ನದಿಗಳ ಒಳಗೊಂಬೊ ಸಮುದ್ರನು ॥ ಬಿಸುಡೋನೆ ಕಾಲಹೊಳೆಯು ಗೋವಿಂದ ॥ ೩ ॥ ಆಪತ್ತು ತಾಪತ್ರಯ ಬೆನ್ನ ಬಿಡದಿದ್ದರೆ ॥ ಶ್ರೀಪತಿ ಶರಣೆನ್ನಲೇಕೊ ಗೋವಿಂದ ॥ ೪ ॥ ಒಂದು ಕುರಿಗೆ ಆರು ಹುಲಿ ಬಂದು ಕವಿದಿವೆ ॥ ಬಂಧನ ಬಿಡಿಸಯ್ಯ ತಂದೆ ಗೋವಿಂದ ॥ ೫ ॥ ಅರಸು ಮುಟ್ಟಲು ದಾಸಿ ರಂಬೆಯಾದಳು ದೇವ ॥ ಪರಶು ಮುಟ್ಟಲು ಲೋಹ ಸ್ವರ್ಣ ಗೋವಿಂದ ॥ ೬ ॥ ಅಡವಿ ವೃಕ್ಷಕೆ ನೀರೆರೆವರಾರೆಲೊ ದೇವ ॥ ತಡೆಯದೆ ಸಲಹೊ ಎನ್ನೊಡೆಯ ಗೋವಿಂದ ॥ ೭ ॥ ಆಡುವ ಬೊಂಬೆಯಂತೆ ಮೂಜಗದೊಡೆಯ ನೀ ॥ ನಾಡಿಸಿ ಕುಣಿವ ಪಾತಕನೆ ಗೋವಿಂದ ॥ ೮ ॥ ಮಾನಾಭಿಮಾನಪೊಡೆಯ ರಂಗ ವಿಠಲ । ಜ್ಞಾನಿಗಳರಸನೆ ಕಾಯೋ ಗೋವಿಂದ ॥ ೯ ॥ ಶ್ರೀಃ ॥

## ೧೦. ರಾಗ ಶಂಕರಾಭರಣ, ಆದಿತಾಳ.

ನಾರಾಯಣ ನಿನ್ನ ನಂಬಿದೆ । ನಿ । ನ್ನೊರತು ಪೊರೆವ ದೈವವೆಲ್ಲಿದೆ ॥ ॥ ಪಲ್ಲ ॥ ನಾ । ವಿಾರಿ ದುಷ್ಕರ್ಮವ ಮಾಡಿದೆ । ಅ । ಪಾರವು ಹಿಮುನೆ ದಯಾನಿಧೆ ॥ ಅನುಪಲ್ಲ ॥ ನಾನಾ ಯೋನಿಗಳಲ್ಲಿ ಬಂದೆನೊ । ಮನ । ತಾಳಲಾರದೆ ಬಲು ನೊಂದೆನೊ । ದೀನರಕ್ಷಕ ಎನಗತಿ ಮುಂದೇನೋ । ಮಾನದಿ ಪಾಲಿಪ ದೊರೆ ನೀನೋ ॥ ೧ ॥ ದಾಸರ ಮನ ಉಲ್ಲಾಸನೆ । ಶ್ರೀಶ । ಆಶ್ರಿತ ಜನರಸು ಪೋಷನೆ ॥ ಸಾಸಿರದಾನಂತ ರೂಪನೆ । ಕ್ಲೇಶ । ನಾಶ ಮಾಡಿಸೊ ಶ್ರೀನಿವಾಸನೆ ॥ ೨ ॥ ರಂಗನಗರ ಉತ್ತುಂಗನೆ । ಉ । ತ್ತುಂಗ ಗುಣಗಳ ಅಂತರಂಗನೆ ॥ ಗರುಡಗಮನ ವಿಹಂಗನೆ । ಅ । ನಂಗನ ಪಿತ ರಂಗವಿಠಲನೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ಭೈರವಿ, ಆದಿತಾಳ.

ಸ್ಮರಿಸಿದವರನು ಕಾವ । ನಮ್ಮ । ಸೂರ್ಯನೇಕ ಪ್ರಭಾವ ॥ ಪಲ್ಲ ॥ ಸುರ ಮುನಿಗಳ ಸಂಜೀವ । ಸಿರಿವೆಂಕಟ ನಮ್ಮನು ಪೊರೆವ ॥ ಅನುಪಲ್ಲ ॥ ವೈಕುಂಠದಿಂದ ಬಂದು । ಶೇಷಾಚಲದಲಿ ನಿಂದು । ಭಕತರನು ಪಾಲಿಪೆ ನೆಂದು । ಅಭಯ ದಯಾಕರ ಸಿಂಧು ॥ ಭಕುತಿ ಮುಕುತಿಯೀವ ಮತ್ಕುಲ ದೇವ । ಸಕಲ ಜನ ಸೇವಿತ ಘನ ಪರಿಪೂರ್ಣ । ವಿಕಸಿತ ಕಮಲನಯನ ಕಂಜನಾಭನೆ । ಪ್ರಕಟಿತ ಶುಭಕೀರ್ತಿಯಿಂದ ಮೆರವ ॥ ೧ ॥ ಜ್ಞಾನಿ ಗಳ ಗೋಚರನು । ತನ್ನ । ಧ್ಯಾನಿಪರ ಮನೋಹರನು । ಮಾನವರಾ ಶಿರಿಧರನು । ಬಹು । ದೈನ್ಯಾದಿಗಳ ಉದ್ಧರನು ॥ ಆನಂದ ಮಹಿಮನು ಅನಂತಾವತಾರನು । ಅನುದಿನ ನೆನೆವರ ಹೃದಯಮಂದಿರನು । ತನು ವಿನ ಕ್ಲೇಶ ದುರಿತಸಂಹರನು । ಘನ ಮಣಿ ಭೂಷಣ ಶೃಂಗಾರನು ॥ ॥ ೨ ॥ ಜಯತು ದೋಷವಿನಾಶ । ಜಯ । ಜಯತು ಮಹಿಮವಿಶೇಷ । ಜಯತು ಶ್ರೀಹೃಷೀಕೇಶ । ಜಯ । ಜಯತು ಶ್ರೀವೆಂಕಟೇಶ ॥ ಜಯತು ಜನಾರ್ದನ ಜಗದ ಮೋಹನ । ಜಯ ಗಜವರದ ಪಾಲಿಪ ನಿಪುಣ । ಜಯ ಕಮಲಜಪಿತ ಜಯ ಜಗದೀಶ । ಜಯ ರಂಗ ವಿಠಲ ಕರುಣ ವಿಲಾಸ ॥ ೩ ॥ ಶ್ರೀಃ ॥

## ೧೨. ರಾಗ ಮಧ್ಯಮಾವತಿ, ಆದಿತಾಳ.

ಪಾಲಿಸೊಳಗದ್ದು ನೀರೊಳಗದ್ದು ಹರಿ ನಾ ನಿನ್ನ ನಂಬಿದೆನೊ ॥ ಪಲ್ಲ ॥ ಜಲಜನಾಭ ನೀನಿಟ್ಟ ತೆರದಲ್ಲಿ ಇರುವೆನೈಯ ॥ ಅನುಪಲ್ಲ ॥ ಸುಖ ದುಃಖದೊಳಗಿಡು ಸುಕೃತ ದುಷ್ಕೃತ ಮಾಡು । ನಿಖಿಳ ದುರಿತದೊಳೆನ್ನ ಲೋಲ್ಯಾಡಿಸು ॥ ಅಖಿಳಾಖಿಳನೆ ನೀನು ಅಭಯಾಭಯವ ಸೂಸು । ಮಕ ರಕುಂಡಲ ನಿನ್ನ ಮತವೆ ಸಮ್ಮತವಯ್ಯ ॥ ೧ ॥ ಜ್ಞಾನಾಜ್ಞಾನದೊಳಗಿಡು ಮಾನಾಪಮಾನವೆ ಮಾಡು । ಅನಾಥಾನಾಥರೊಳೆನ್ನ ಅನವರತಾಗಿರಿಸೊ ॥ ದೀನಾದೀನತೆಯೊಳಗೆನ್ನಾ ನೀ ನೀಡ್ಯಾಡು । ಶ್ರೀನಾಥ ನಿನ್ನಯ ಮತ ಮತವೆ ಸಮ್ಮತವಯ್ಯ ॥ ೨ ॥ ಪ್ರಾಣಾಪಾನ ವ್ಯಾನೋದಾನ ಸಮಾನಂಗಳ

ಭೇದಿಸು। ಘನದಾರಿದ್ರ್ಯವ ನೂಕು ಸುಖವೆ ಸುರರೊಳಘಾಕು॥ ಮುನಿಜನರ ಸಂಗ ಪೊರೆವ ರಂಗವಿಠಲ। ನಿನ್ನಯ ಮತ ಮತವೆ ಸನ್ಮತವಯ್ಯ॥ ೩॥

೧೩. ರಾಗ ಶಂಕರಾಭರಣ, ಅಟತಾಳ.

ಎಲ್ಯಾಡಿ ಓಡಿ ಬಂದೆ ಹೇಳಯ್ಯಾ ॥ ಪಲ್ಲ ॥ ನಿಲ್ಲು ನಿಲ್ಲು ಗೋಪಾಲ ಕೃಷ್ಣಯ್ಯಾ ॥ ಅನುಪಲ್ಲ ॥ ನೊಸಲಲ್ಲಿ ಕಿರಿಬೆವರಿಟ್ಟದೆ । ಇಲ್ಲಿ । ಹೊಸಪರಿ ಸುದ್ದಿಯು ಹುಟ್ಟಿದೆ॥ ಹುಸಿಯಲ್ಲ ನಿನ್ನ ಮಾತು ಮುಟ್ಟಿದೆ। ನಿನ್ನ । ನಸುನಗೆ ಕೀರ್ತಿಯು ಹೆಚ್ಚಿದೆ ॥ ೧ ॥ ಬೆರಳ ಉಂಗುರವೆಲ್ಲಿ ಹೋಗಿದೆ। ನಿನ್ನ। ಕೊರಳ ಪದಕವೆಲ್ಲಿ ನೀಗಿದೆ॥ ಅರಳೆಲೆ ಮಾಗಾಯಿ ಸಾಗಿದೆ । ಅವಳ । ದುರುಳ ಮಹಿಮೆಯೆ ಹೀಂಗಾಗಿದೆ ॥ ೨ ॥ ಕಳ್ಳತನವು ಹೇಗೆ ಮಾಡಿದೆ। ನಿನ್ನ। ಸುಳ್ಳು ಕಡೆಗೆ ನಾ ನೋಡದೆ । ಬಲು ಹರುಷದಿಂದಲಿ ಮನ ತಾಳಿದೆ । ಚಲುವ ರಂಗವಿಠಲ ನಗೆ ಗೇಡಾಗಿದೆ ॥ ೩ ॥ ಶ್ರೀಃ ॥

೧೪. ರಾಗ ಜುಂಜೋಟಿ, ಅಟತಾಳ.

ನಾನೇನು ನಿನಗೆ ಬೇಡುವದಿಲ್ಲ । ಎನ್ನ। ಹೃದಯ ಕಮಲದೊಳು ನಿಂದಿರು ಹರಿಯೆ ॥ ಪಲ್ಲ ॥ ಶಿರ ನಿನ್ನಾ ಚರಣದೊಳೆರಗಲಿ। ಎನ್ನ। ನಯನಚಕ್ಷುಗಳು ನಿನ್ನ ನೋಡಲೊ ಹರಿಯೆ॥ ಕರ್ಣ ಗೀತಂಗಳ ಕೇಳಲಿ। ಎನ್ನ। ನಾಸಿಕ ನಿರ್ಮಾಲ್ಯಾಘ್ರಾಣಿಸಲೊ ಹರಿಯೆ ॥ ೧ ॥ ನಾಲಿಗೆ ನಿನ್ನ ಕೊಂಡಾಡಲಿ। ಎನ್ನ। ಕರಗಳೆರಡು ಕೈಯ ಮುಗಿಯಲೊ ಹರಿಯೆ। ಪಾದ ತೀರ್ಥಯಾತ್ರೆ ಮಾಡಲಿ । ನಿನ್ನ । ಧ್ಯಾನವನೆನಗೆ ಕೊಡುಕಂಡ್ಯ ಹರಿಯೆ ॥ ೨ ॥ ಬುದ್ಧಿ ನಿನ್ನೊಳು ನಲಿದಾಡಲಿ। ಎನ್ನ ಚಿತ್ತ ನಿನ್ನೊಳು ಕುಣಿದಾಡಲೊ ಹರಿಯೆ ॥ ಭಕ್ತ ಜನರ ಸಂಗ ದೊರಕಲಿ। ರಂಗ। ವಿಟ್ಠಲ ನಿನ್ನ ದಯವಾಗಲೊ ಹರಿಯೆ॥ ೩॥ ಶ್ರೀಃ॥

೧೫. ರಾಗ ಪುನ್ನಾಗವರಾಳಿ, ಝಂಪೆತಾಳ.

ಏಕೆ ಪುಟ್ಟಿಸಿದಿ ನೀ ಸಾಕಲಾರದೆ ಜಗ । ದೇಕ ಕಾರಣ ಪುರುಷನೆ ॥ ಪಲ್ಲ ॥ ಏಕೋ ವಿಷ್ಣುಯೆಂಬೊ। ವಾಕು ಚಿಂತಿಸಿ ಇಂಥಾ।

ಕಾಕುಮಾಡುವದುಚಿತವೆ। ಕೃಷ್ಣ ॥ ಅನುಪಲ್ಲ ॥ ಒಡಲಿಗನ್ನವ ಕಾಣೆ। ಉಡಲು ವರಿವೆಯು ಕಾಣೆ । ಗಡಗಡನೆ ನಡುಗುತಿಹೆನೊ ॥ ಮಡದಿ ಮಾತೆಯರ ಬಿ। ಟ್ಟೊಡಹುಟ್ಟಿದವರ ಬಿ। ಟ್ಟಡವಿ ಪಾಲಾದೆನಲ್ಲ॥ ಕ ಡು ; ಕೊಡುವವರಿಲ್ಲ। ನುಡಿಯ ಕೇಳುವರಿಲ್ಲ । ಬಡತನವು ಕಂಗೆಡಿಸಿತೊ। ಕಡೆಹಾಯ್ಸುವರ ಕಾಣೆ। ನಡು ಮಡುವಿನೊಳು ಕೈಯ। ಬಿಡದೆ ದಡ ವನು ತೋರಿಸೋ। ಕೃಷ್ಣ ॥ ೧ ॥ ಕೊಟ್ಟವರ ಸಾಲವನು। ಕೊಟ್ಟು ತೀರಿ ಸದವರ । ಹೊಟ್ಟೆಯಲಿ ಪುಟ್ಟಲಾಯ್ತೋ ॥ ಎಷ್ಟು ಜನ್ಮದಿ ಮನ। ಮುಟ್ಟಿ ಮಾಡಿದ ಕರ್ಮ। ಗಂಟೇಗ ಉಣಿಸುತಿಹನೋ ॥ ಸೃಷ್ಟಿಯೊಳಗೆ ನ್ನಂಥ। ಕೆಟ್ಟಪಾಪಿಷ್ಠ ಜನ। ಪುಟ್ಟಿಸಲಿಲ್ಲವೇನೋ॥ ವಿಟ್ಠಲನೆ ನಿನ್ನ ಮನ। ಮುಟ್ಟಿ ಭಜಿಸಿ ಹಿಂದೆ। ಎಷ್ಟು ಜನ ಬದುಕಲಿಲ್ಲ। ಕೃಷ್ಣ ॥ ೨ ॥ ಆಳು ದೇಹವು ಗೇಣು । ಕೇಳಾಗಿ ಪಲ್ಗಿರಿದು । ಖೂಳಜನರುಗಳ ಮನೆಗೆ॥ ಹಾಳು ಒಡಲಿಗೆ ತುತ್ತು । ಕೂಳಿಘೋಗ್ಯವರನ್ನ । ಓಲೈಸ ಲಾರೆನಲ್ಲೊ ॥ ಬಾಳು ಈ ಪರಿಯಾದ। ಮೇಲೆ ಭೂಮಿಯಲಿ ಬಹು। ಕಾಲಕಳೆಯುವದುಚಿತವೆ॥ ಆಲಸ್ಯ ಮಾಡದೀ। ವೇಳೆಯಲಿ ನೀನೆನ್ನ। ಪಾಲಿಸಲು ಬಹು ಕೀರ್ತಿಯೋ। ಕೃಷ್ಣ ॥ ೩ ॥ ಏನೆಂದು ಸಿರಿಯರಸ। ನೆಂದು ಶ್ರುತಿಸಾರುತಿದೆ । ಬಂದುದೀಗೇನೊ ಸಿರಿಯೊ ॥ ಒಂದೊಂದು ನಿಮಿಷ ಯುಗ। ದಿಂದಧಿಕವಾಗುತಿದೆ। ಮುಂದೋರದಾಂಗಾಯಿತೊ ॥ ಸಂದೇಹವಿಲ್ಲ ಗೋ । ವಿಂದ ಶ್ರೀಪಾದದಾಣೆ। ತಂದೆ ನೀ ರಕ್ಷಿಸದಿರೆ॥ ಮುಂದೆ ಭಜಿಸಿದವರು ಹೀ। ಗೆಂದು ವಾರ್ತೆಯ ಕೇಳೆ। ಚಂದದಪಕೀರ್ತಿ ಮಾತು। ಕೃಷ್ಣ ॥ ೪ ॥ ಹರಿಯಾತ್ರೆ ಮಾಡಲಿಲ್ಲ। ಹರಿಮೂರ್ತಿ ನೋಡ ಲಿಲ್ಲ । ಹರಿದಾಸನಾಗಲಿಲ್ಲ॥ ಹರಿಯ ಸ್ಮರಣೆಯ ಸ್ಮರಿಸಿ। ಶಿರಿತುಲಸಿ ಪುಷ್ಪವನು । ಕರವೆತ್ತಿ ನೀಡಲಿಲ್ಲ॥ ಸರುವಜ್ಞರಾಯರು । ವಿರಚಿಸಿದ ಗ್ರಂಥಗಳ। ದರುಶನವ ಮಾಡಲಿಲ್ಲ ॥ ಸ್ಮರಿಸಲಾರದ ಪಾಪ । ಸ್ಮರಣೆ ಪೂರ್ವಕ ಮಾಡಿ। ಸ್ಥಿರ ಭಾಜನಾದೆನಲ್ಲ। ಕೃಷ್ಣ ॥ ೫ ॥ ಉರಿಯೊಳಗೆ ಬಿದ್ದು ಶ। ರೀರವನೆ ಕಳೆಯಲೊ। ಪರುವತವನೇರ್ಯುರುಳಲೊ॥ ಕೊರಳಿ ಘಗ್ಗವ ಹಾಕಿ। ಮರವೇರಿ ಕರಬಿಡಲೊ। ಗರಗಸದಿ ಶಿರ ತರಿಯಲೊ ॥

ಕರಿಯು ಸೊಂಡಿಲ ಪಿಡಿದು । ಧರಧರನೆ ಎಳೆಯುಲೊ । ಉರಗಗರಳವ ಸವಿಯಲೊ ॥ ಕರುಣವಾರಿಧಿ ನೀನೆ । ಕರಪಿಡಿದು ಸಲಹದಿರೆ । ಧರೆಯನುದ್ಧರಿಪರ್ಯಾರೊ । ಕೃಷ್ಣ ॥ ೬ ॥ ಎಷ್ಟು ಹೇಳಲಿ ಯೆನ್ನ । ಕಷ್ಟಕೋಟಿಗಳನ್ನ । ಸುಟ್ಟೀಗ ಬೇಯಿಸಿದಿಕೊ ॥ ಕೃಷ್ಣನಾಮ ವಜ್ರಕ್ಕೆ । ಬೆಟ್ಟ ದುರಿತವನೀಗ । ಥಟ್ಟನೆ ಬಂದು ನೀನು ॥ ಕಷ್ಟಪಟ್ಟ ಮಗನೆಂದು । ದೃಷ್ಟಿ ನಿರೋಧಿಸ್ಯೆನ್ನ । ಗಟ್ಟ್ಯಾಗಿ ಪಿಡಿವರಾರೊ ॥ ಇಷ್ಟವನು ಸಲ್ಲಿಸಿ । ಗುಟ್ಟಲ್ಲಿ ನೀ ರಂಗ । ವಿಟ್ಠಲ ಯೆನ್ನ ಕಾಯೋ ॥ ಕೃಷ್ಣ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೬. ರಾಗ ಶಂಕರಾಭರಣ, ಆದಿತಾಳ.

ಪೋಪ ಹೋಗೋಣ ಬಾರೋ ರಂಗ । ಪೋಪ ಹೋಗೋಣ ॥ ॥ ಪಲ್ಲ ॥ ಪೋಪ ಹೋಗೋಣ ಬಾರೋ ರಂಗ । ಪೊಡವಿಗೊಡೆಯ ಬಾಲನೆ ॥ ಸರ್ಪಶಯನ ನಿನಗೆ ಸರಿಯಾರು । ಕಾಣೆ ಜಗದೊಳು ॥ ಅನುಪಲ್ಲ ॥ ಜಾಹ್ನವೀಯ ತೀರವಂತೆ । ಜನಕರಾಯನ ಕುವರಿಯಂತೆ ॥ ಧನುವನೆತ್ತಿ ಬಡಿದವರಿಗೆ । ಜಾನಕೀಯು ಕೊಡುವರಂತೆ ॥ ೧ ॥ ಕುಂಡನೀಯ ನಗರವಂತೆ । ಭೀಷ್ಮಕರಾಯನ ತನಯಳಂತೆ ॥ ಶಿಶುಪಾಲನ ಒಲ್ಲಳಂತೆ । ಓಲೆ ನಿನಗೆ ಬರೆದಳಂತೆ ॥ ೨ ॥ ಕೌರವರು ಪಾಂಡವರು । ಉತ್ತರೆಯಾಡಿ ಸೋತರಂತೆ ॥ ರಥವ ಪಿಡಿದು ನಡೆಸುವದಕ್ಕೆ । ರಂಗವಿಠಲ ಬರಬೇಕಂತೆ ॥ ೩ ॥ ಶ್ರೀಃ ॥

೧೭. ರಾಗ ಕಮಾಚ್, ಆದಿತಾಳ.

ತಪ್ಪೇನ ಮಾಡಿದೆನೊ । ಯಾದವೇಂದ್ರ । ತಪ್ಪೇನ ಮಾಡಿದೆನೊ ॥ ಪಲ್ಲ ॥ ತಪ್ಪೇನೊ ನಿನಗೆ ಯೆನ್ನಪ್ಪ ಕೈಬಿಡುವಂಥ ॥ ಅನುಪಲ್ಲ ॥ ಪಾತಕರೊಳಗತಿ ಪಾತಕಿಯೆ ನಾನು । ಪ್ರೀತನ್ನ ಮಾಡಿಕೋ ಅ । ನಾಥ ಬಂಧುವೆ ಇಂಥ ॥ ೧ ॥ ಘೋರ ದುರಿತವೆಲ್ಲ । ಹೀರಿ ಬಿಸಾಡುವ ॥ ಸಾರುವ ಶ್ರುತಿಗಳು । ಪಾರಗಾಣಿಸದಂಥ ॥ ೨ ॥ ಗಂಗಾ ಜನಕ ಗುರು । ರಂಗವಿಠಲ ನರ । ಸಿಂಗ ನಿನ್ನಯ ಅಂತ । ರಂಗ ವಲಿಯದಂಥ ॥ ೩ ॥ ಶ್ರೀಃ ॥

೧೮. ರಾಗ ಆನಂದಭೈರವಿ, ಏಕತಾಳ.

ಇಕ್ಕೋ ನೋಡೆ ರಂಗನಾಥನ । ಚಿಕ್ಕ ಪಾದವ ॥ ಪಲ್ಲ ॥ ಸಿಕ್ಕಿತೆ ಶ್ರೀ ಲಕ್ಷ್ಮಿಪತಿಯ । ದಿವ್ಯ ಪಾದವ ॥ ಅನುಪಲ್ಲ ॥ ಶಂಖ ಚಕ್ರ ಗದಾ ಪದ್ಮ ಅಂಕಿತ ಪಾದವ । ಅಂಕುಶ ಕುಲಿಶ ಕಾಮಿನಿ ಅಂಕಿತ ಪಾದವ ॥ ಪಂಕಜಾಸನನ ಹೃದಯದಲ್ಲಿ ನಲಿಯುವ ಪಾದವ । ಸಂತಾಪಹರಣ ವೆಂಕಟೇಶನ ದಿವ್ಯ ಪಾದವ ॥ ೧ ॥ ಲಲನೆ ಲಕ್ಷ್ಮಿಯಂಕದಲ್ಲಿ ನಲಿಯುವ ಪಾದವ । ಜಲಜಾಸನನ ಅಭೀಷ್ಟವೆಲ್ಲ ಸಲಿಸುವ ಪಾದವ ॥ ಮಲ್ಲರಗೆಲಿದು ಕಂಸಾಸುರನ ಕೊಂದ ಪಾದವ । ಬಲಿಯ ಮೆಟ್ಟಿ ಭಾಗೀರಥಿಯ ಪಡೆದ ಪಾದವ ॥ ೨ ॥ ಬಂಡೆಯ ಬಾಲೆಯ ಮಾಡಿದ ಉದ್ದಂಡ ಪಾದವ । ಬಂಡಿಲಿದ್ದ ಶಕಟಾಸುರನ ಒದ್ದ ಪಾದವ ॥ ಅಂಡಜ ಹನುಮರ ಭುಜದೊಳೊಪ್ಪುವ ಪಾದವ ॥ ಕಂಡೆವೆ ಶ್ರೀರಂಗವಿಠಲನ ದಿವ್ಯ ಪಾದವ ॥ ೩ ॥ ಶ್ರೀಃ ॥

೧೯. ರಾಗ ಶಂಕರಾಭರಣ, ಅಟತಾಳ.

ಇದನಾದರು ಕೊಡದಿದ್ದರೆ । ನಿನ್ನ । ಪದ ಕಮಲವ ನಂಬಿ ಭಜಿಸುವದೇಕೊ ॥ ಪಲ್ಲ ॥ ನಿನ್ನ ಪದ ಕಮಲವ ನಂಬಿ ಭಜಿಸುವದೇಕೊ ॥ ಅನುಪಲ್ಲ ॥ ಗ್ರಾಸವಸನಗಳಿಲ್ಲವೆಂದು । ನಿನ್ನ । ಬ್ಯಾಸರಿಸಿ ಬೇಡ ಬಂದದ್ದಿಲ್ಲ ॥ ವಾಸುದೇವನೆ ನಿನ್ನ ದಾಸರ ದಾಸರ । ದಾಸರ ದಾಸ್ಯವ ಕೊಡು ಸಾಕೆಂದರೆ ॥ ೧ ॥ ಸತಿಸುತರು ಸಂತತ ಭಾಗ್ಯದಲ್ಲಿಪ್ಪ । ಅತಿಶಯ ಬೇಕೆಂದು ಬಂದದ್ದಿಲ್ಲ ॥ ಇತರ ವಿಷಯಗಳಿಗೆರಗುವದೆನ್ನ ಮನಸು । ಕಥಾಮೃತವನೆ ಕೇಳಿಸು ಸಾಕೆಂದರೆ ॥ ೨ ॥ ಒಡವೆಗಳು ಒಡ್ಯಾಣಗಳಿಲ್ಲೆಂದು । ಬಡವನೆಂದು ಬೇಡಬಂದದ್ದಿಲ್ಲ ॥ ಒಡೆಯ ನಿನ್ನಡಿಗಳಿಗೆರಗುವದೆ ಸುಖ । ಬಿಡದಿರುವದು ಒಂದೆ ಕೊಡು ಸಾಕೆಂದರೆ ॥ ೩ ॥ ಸಾಲವಾಯಿತು ಸಂಬಳವು ಎನಗಿಲ್ಲ । ಸಾಲವೆಂದು ಬೇಡ ಬಂದದ್ದಿಲ್ಲ ॥ ನಾಲಿಗೆಯಲಿ ನಿನ್ನ ನಾಮದುಚ್ಚಾರಣೆ । ಪಾಲಿಸ ಬೇಕೆಂದು ಬಂದೆ ನಾನಲ್ಲದೆ ॥ ೪ ॥ ಆಗಬೇಕು ರಾಜ್ಯ ಭೋಗಗಳೆನಗೆಂದು । ಬೇಗದಿಂದಲಿ ಬೇಡಬಂದ

ದ್ದಿಲ್ಲ ॥ ನಾಗಶಯನ ರಂಗವಿಠಲ ನಿನ್ನಯ । ಬಾಗಿಲ ಕಾಯ್ವ ಭಾಗ್ಯವೆ ಸಾಕೆಂದರೆ ॥ ೫ ॥ ಶ್ರೀಃ ॥

## ೨೦. ರಾಗ ಪಂತುವರಾಳಿ, ಅಟತಾಳ.

ವ್ಯರ್ಥವಲ್ಲವೆ । ಜನ್ಮ । ವ್ಯರ್ಥವಲ್ಲವೆ ॥ ಪಲ್ಲ ॥ ತೀರ್ಥಪಾದನ ಭಜಿಸಿ ಕೃ । ತಾರ್ಥನಾಗದವನ ಜನ್ಮ । ವ್ಯರ್ಥವಲ್ಲವೆ ॥ ಅನುಪಲ್ಲ ॥ ಅರುಣೋದಯದಲೆದ್ದು । ವರನದೀಲಿ ಸ್ನಾನ ಮಾಡಿ ॥ ಅರಳು ಮಲ್ಲಿಗೆ ಜಾಜಿ ತಂದು ಶ್ರೀ । ಹರಿಗೆ ಅರ್ಪಿಸದವನ ಜನ್ಮ ॥ ೧ ॥ ಒಂದು ಶಂಖ ಉದಕವನ್ನು । ಚಂದದಿಂದ ಹರಿಗೆ ಯೆರದು ॥ ಗಂಧ ಅಕ್ಷತೆ ಪುಷ್ಪಗಳಿಂದ । ಸಿಂಧುಶಯನನರ್ಚಿಸದವನ ॥ ೨ ॥ ಎಳೆಯ ತುಲಸಿದಳವ ತಂದು । ನಳಿನನಾಭಗೆ ಅರ್ಚನೆ ಮಾಡಿ ॥ ಸುಲಭದಿಂದ ಹಲವು ಕಾಲದ । ಮಲವ ಕಳೆಯದವನ ಜನ್ಮ ॥ ೩ ॥ ಭೋಗಿಶಯನ ದಿನದಲೆದ್ದು । ಭೋಗಗಳನೆಲ್ಲ ತೊರೆದು ॥ ಭಾಗವತರ ಮೇಳದಿಂದ । ಜಾಗರಣೆಯ ಮಾಡದವನ ॥ ೪ ॥ ಭಂಗುರದ ದೇಹ ಪಡೆದು । ರಂಗನಾಥನ ಪೂಜೆ ಮಾಡಿ ॥ ರಂಗ ಪಟ್ಟಣದೊಳಗೆ ಶ್ರೀ । ರಂಗವಿಠಲನ ನೋಡದವನ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ಮುಖಾರಿ, ಅಟತಾಳ.

ರಾಳ ಬೆಳದಿಂಗಳು ಈ ಸಂಸಾರ । ಕತ್ತಲೆ ಬೆಳದಿಂಗಳು ॥ ಪಲ್ಲ ॥ ಉಂಟಾದ ಕಾಲಕ್ಕೆ ನೆಂಟರು ಇಷ್ಟರು । ಬಂಟರಾಗಿ ಬಂದು ಬಾಗಿಲ ಕಾಯ್ವರು ॥ ಉಂಟಾದ ದಿನತಪ್ಪಿ ಬಡತನ ಬಂದರೆ । ಒಂಟಿ ಹಾಂಗೆ ಕತ್ತ ಮೇಲಕ್ಕೆತ್ತುವರು ॥ ೧ ॥ ಹೆಡಿಗೆಯ ಭಕ್ಷಕ್ಕೆ ಗಡಿಗೆ ತುಪ್ಪವಿಕ್ಕಿ । ಸಡಗರದಿಂದುಂಬೊ ಸರಿನೆಂಟರು ॥ ಸಡಗರ ದಿನತಪ್ಪಿ ಬಡತನ ಬಂದರೆ । ಸುಡು ನುಡಿಗಳನಾಡಿ ನಡಿನಡಿಯೆಂಬೊರು ॥ ೨ ॥ ಏರುವ ಪಲ್ಲಕ್ಕಿ ಅಂದಣ ದಂಡಿಗೆ । ಮೂರು ದಿನದ ಭಾಗ್ಯ ಝುಣಝುಣವು ॥ ನೂರಾರು ಸಾವಿರ ದಂಡವ ಕೊಟ್ಟರೆ । ರಂಗವಿಟ್ಠಲಗೆ ಸರಿಯೆಂಬೊರಯ್ಯ ॥ ೩ ॥ ಶ್ರೀಃ ॥

## ೨೨. ರಾಗ ಪಂತುವರಾಳಿ, ಅಟತಾಳ.

ರಂಗನಾಥನ ನೋಡುವ ಬನ್ನಿ ॥ ಪಲ್ಲ ॥ ಶ್ರೀ। ರಂಗನ ದಿವ್ಯ ವಿಮಾನ ದಲ್ಲಿಹನ ॥ ಅನುಪಲ್ಲ ॥ ಕಮನೀಯ ಗಾತ್ರನ ಕರುಣಾಂತರಂಗನ । ಕಾಮಿತಾರ್ಥ ಕಲ್ಪವೃಕ್ಷನ ॥ ಕಮಲದಳನೇತ್ರನ ಕಸ್ತೂರಿ ರಂಗನ । ಕಾಮಧೇನುವಾದ ಕಾವೇರಿ ರಂಗನ ॥ ೧ ॥ ವಾಸುಕಿಶಯನನ ವಾರಿಧಿ ನಿಲಯನ । ವಾಸುದೇವ ವಾರಿಜನಾಭನ ॥ ವಾಸವಾದಿ ಭಕ್ತ ಹೃದ ಯಾಂಬರದಲ್ಲಿ। ವಾಸವಾಗಿರುತಿಹ ವಸುದೇವ ಸುತನಾ ॥ ೨ ॥ ಮಂಗಳ ಗಾತ್ರನ ಮಂಜುಳ ಭೂಷನ । ಗಂಗಾಜನಕ ಅಜಜನಕನ ॥ ಸಂಗೀತ ಲೋಲನ ಸಾಧು ಸಮ್ಮತ । ರಂಗವಿಠ್ಠಲ ರಾಜೀವ ನೇತ್ರನ ॥ ೩ ॥

## ೨೩. ರಾಗ ಮೋಹನ, ಅಟತಾಳ.

ಸರಸಿಜಾಕ್ಷ ಸರಸದಿಂದ । ಸರಸಿಜೋದ್ಭವಗೊಲಿದು ಬಂದ ॥ ಪಲ್ಲ ॥ ಉರಸಿನ ಮೇಲೆ ಸರಸಿಜಾಕ್ಷಿಯನಿರಿಸಿ ಬಂದ ॥ ಅನುಪಲ್ಲ ॥ ಧೀರ ಶರಧಿ ಗಂಭೀರಾ। ವರಘನಸಾರ ಕಸ್ತೂರಿ ತಿಲಕಧರಾ ॥ ಹಾರ ಮೌಕ್ತಿಕ ಕೇಯೂರ। ಧರಿಸಿದ ನವನೀತ ಚೋರಾ ಬಂದಾ ॥ ೧ ॥ ನಂದಗೋಪೀ ಯಾನಂದ ಮಾಡಿದ। ಕಂದಾ ಗೋಕುಲದಿ ಬಂದ ॥ ಸುಂದರಿಯರ ಅಂದದಿಂದ ಗೋ। ವಿಂದ ಮುಕುಂದ ॥ ೨ ॥ ಅಂಗನೆಯರ ತುಂಗ ಕುಚಗಳಾ । ಲಿಂಗನ ಮಾಡಿ ನವಮೋಹನಾಂಗ ॥ ರಂಗವಿಠಲನ ಸೊಬಗ ನಮ್ಮಂತ। ರಂಗದೊಳಗಿಹ ಕಲ್ಮಷ ಭಂಗಾ ॥ ೩ ॥ ಶ್ರೀಃ ॥

## ೨೪. ರಾಗ ಧನಾಸಿ, ಆದಿತಾಳ.

ಹರೇ ವೆಂಕಟ ಶೈಲವಲ್ಲಭ ಪಾಲಿಸೊ ನೀ ಯೆನ್ನ ॥ ಪಲ್ಲ ॥ ದುರಿತ ದೂರ ನೀನಲ್ಲದೆ ಧರೆಯೊಳು। ಧೊರೆಗಳ ನಾ ಕಾಣೆ। ನಿನ್ನಾಣೆ ॥ ೧ ॥ ಇಂದಿರೇಶ ಅರವಿಂದನಯನ ಎನ್ನ । ತಂದೆತಾಯಿ ನೀನೇ ॥ ಪೊಂದಿದ ವರ ಅಘವೃಂದವ ಕಳೆವ। ಮಂದರಾದ್ರಿಧರನೆ ಶ್ರೀಧರನೇ ॥ ೨ ॥ ಮಂಗ ಳಾಂಗಮಹನೀಯ ಗುಣಾರ್ಣವ। ಗಂಗೋದಿತ ಪಾದ ॥ ಅಂಗಜಪಿತ ಅಹಿರಾಜ ಶಯ್ಯ ಶ್ರೀ । ರಂಗವಿಠಲ ಧೊರೆಯೋ। ಶ್ರೀಹರಿಯೋ ॥ ೩ ॥

## ೨೫. ರಾಗ ವರಾಳಿ, ಆದಿತಾಳ.

ಯಾಕೋ ಇಂಥ ದುಡುಕು । ಲೋಕೇಶನಯ್ಯ ॥ ಪಲ್ಲ ॥ ಗೊಲ್ಲ ಬಾಲಕರು ನೀವೆಲ್ಲರು ಕೂಡಿಕೊಂಡು ॥ ಗುಲ್ಲು ಮಾಡದೆ ಮೊಸರೆಲ್ಲ ಸವಿದ ಕೃಷ್ಣ ॥ ೧ ॥ ಪೂತನಿ ಮೊಲೆಯನ್ನು ಭೀತಿಯಿಲ್ಲದೆ ಉಂಡು । ಘಾತವು ಮಾಡಿದಿ ಮಾತನಾಡಿಸೊ ರಂಗ ॥ ೨ ॥ ದುಷ್ಟ ಕಂಸನ ನೀನು ಕಷ್ಟವಿಲ್ಲದೆ ಮಡುಹಿ ॥ ಮುಷ್ಟಿಕನ ಕೊಂದು ದೃಷ್ಟಿ ತಾಗಿತೆಂದು ॥ ॥ ೩ ॥ ನಿಜ ಮಹಿಮನೆ ಸಜ್ಜನರ ಸಲಹಿದಿ ॥ ದುರ್ಜನರ ಕೊಂದ ಅರ್ಜುನ ಸಾರಥಿ ॥ ೪ ॥ ಅಂಗಿ ಟೊಪ್ಪಿಗೆ ಉಂಗುರ ಉಡಿದಾರ । ಶೃಂಗರಿಸಿಕೊಂಡು ಶ್ರೀರಂಗವಿಠಲ ಬಾರೋ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೬. ರಾಗ ಆರಭಿ, ಅಟತಾಳ.

ಬಾರೋ ಮನೆಗೆ ಗೋವಿಂದ। ನಿನ್ನಂಘ್ರಿಕಮಲವ। ತೋರೋ ಯೆನಗೆ ಮುಕುಂದ ॥ ಪಲ್ಲ ॥ ನಲಿದಾಡು ಮನದಲಿ । ಮಾರಾಪಿತ ಆನಂದ ॥ ಚಾರುತರ ಶರೀರ ಕರುಣಾ। ವಾರಿನಿಧಿ ಭವಘೋರನಾಶನ। ವಾರಿಜಾಸನ ವಂದ್ಯ ನೀರಜ । ಸಾರಸದ್ಗುಣ ಹೇ ರಮಾಪತೇ ॥ ಅನುಪಲ್ಲ ॥ ನೋಡು ದಯದಿಂದೆನ್ನ । ಕರಪದುಮ ಶಿರದಲಿ । ನೀಡು ಭಕ್ತ ಪ್ರಸನ್ನ । ನಲಿದಾಡು ಮನದಲಿ। ಬೇಡಿಕೊಂಬುವೆನೊ ನಿನ್ನ। ಆನಂದ ಘನ್ನ॥ ಮಾಡದಿರು ಅನುಮಾನವ ಕೊಂ। ಡಾಡುವೆನು ತವ ಮಹಿಮೆಗಳನು। ಜೋಡಿಸುವೆ ಕರಗಳನು ಚರಣಕೆ । ಕೂಡಿಸೋ ತವ ದಾಸಜನರೊಳು ॥ ಬಾರೋ ॥ ೧ ॥ ಹೇಸಿ ವಿಷಯಗಳಲ್ಲಿ । ತೊಳಲಾಡಿ ನಾ ಬಲು । ಕ್ಲೇಶ ಪಡುವದು ಬಲ್ಲಿ । ಧನಯುವತಿಗಳ ಸುಖ । ಲೇಶವೆಂಬುವದು ಕೊಲ್ಲಿ । ಆಶೆ ಬಿಡಿಸಿಲ್ಲಿ ॥ ಯೇಸು ಜನ್ಮದ ದೋಷದಿಂದಲಿ । ಈಸುವೆನು ಇದರೊಳಗೆ ಇಂದಿಗೆ । ಮೋಸವಾಯಿತು ಆದುದಾಗಲಿ । ಶ್ರೀಶ ನೀ ಕೈಪಿಡಿದು ರಕ್ಷಿಸು ॥ ೨ ॥ ನೀನೆ ಗತಿಯು ಏನಗಿಂದು । ಉದ್ಧರಿಸೊ ಬೇಗನೆ ।

ದೀನಜನರಿಗೆ ಬಂಧೋ । ನಾ ನಿನ್ನ ಸೇವಕ । ಶ್ರೀನಿವಾಸ ಎಂದೆಂದು । ಕಾರುಣ್ಯಸಿಂಧೋ ॥ ಪ್ರಾಣಪತಿ ಹೃದಯಾಬ್ಜ ಮಂಟಪ । ಸ್ಥಾನದೊಳ ಗಭಿವ್ಯಾಪ್ತ ಚಿನುಮಯ । ಧ್ಯಾನಗೋಚರನಾಗು ಕಣ್ಣಿಗೆ । ಕಾಣುವೆನು ಶ್ರೀರಂಗವಿಠ್ಠಲ ॥ ೩ ॥ ಶ್ರೀಃ ॥

## ೨೭. ರಾಗ ಆನಂದಭೈರವಿ, ಅಟತಾಳ.

ಇಟ್ಹ್ಯಾಂಗೆ ಇರುವೆನು ಹರಿಯೇ । ಎನ್ನ ಧೊರೆಯೇ ॥ ಪಲ್ಲ ॥ ಸೃಷ್ಟಿ ಗೊಂದಿತ ಪಾದ ಪದುಮ ಶ್ರೀಹರಿಯೇ ॥ ಅನುಪಲ್ಲ ॥ ಸಣ್ಣ ಶಾಲ್ಯೋ ದನ್ನ ಬೆಣ್ಣೆ ಕಾಸಿದ ತುಪ್ಪ । ಚಿನ್ನದ ಹರಿವಾಣದಲಿ ಭೋಜನ ॥ ಘನ್ನ ಮಹಿಮ ನಿನ್ನ ಕರುಣ ತಪ್ಪಲು ಕಾ । ದನ್ನಕ್ಕೆ ಬಾಯ ಬಿಡಿಸುವೆ ಯಲ್ಲೋ ಸ್ವಾಮಿಾ ॥ ೧ ॥ ಕೆಂಪಿಲಿ ಪೊಳೆವ ಪೀತಾಂಬರನುಡಿಸುವಿ । ಸೊಂಪಿನಂಚಿನ ಶಾಲು ಹೊದಿಸುವಿಯೋ ಕೃಷ್ಣ ॥ ಕಪಿಲಹರೇ ನಿನ್ನ ಕೃಪೆಯು ತಪ್ಪಿದ ಮೇಲೆ। ಹೇ ಪಿನಾಕಿವಂದ್ಯ ಕೌಪೀನ ದೊರೆಯದೊ ॥ ॥ ೨ ॥ ಚಂದ್ರಶಾಲೆ ಚಂದ್ರಕಿರಣದಂತೊಪ್ಪುವ । ಚಂದದ ಮಂಚ ದೋಳ್ಮಲಗಿಸುವಿ ॥ ಮಂದರೋದ್ಧರ ನಿನ್ನ ಮಮತೆ ತಪ್ಪಿದ ಮೇಲೆ । ಮಂದಿರದೊಳು ತೋಳ್ತಲೆದಿಂಬು ಮಾಡಿಸುವಿ ॥ ೩ ॥ ನರಯಾನ ದೊಳು ಕ್ಷಣ ನರವರನೆನಿಸುವಿ । ವರ ಛತ್ರಚಾಮರ ಹಾಕಿಸುವಿ ॥ ಕರುಣನಿಧೇ ನಿನ್ನ ಕರುಣ ತಪ್ಪಿದ ಮೇಲೆ । ಚರಣ ಭರಣ ಪಾದರ ಕ್ಷೆಯು ದೊರೆಯದೊ ॥ ೪ ॥ ಗಂಗಾಜನಕ ಪಾಂಡುರಂಗ ನಿನ ಭಕು ತರ । ಸಂಗವಿರಲಿ ದುಷ್ಟ ಸಂಗ ಬೇಡಾ ಬೇಡಾ ॥ ಅಂಗನೆಯರ ಕೂಡಾನಂಗ ಬಾಣಕೆ ಸಿಲುಕಿ । ಭಂಗವ ಪಡಲಾರೆ ರಂಗವಿಟ್ಠಲ ಕಾಯೋ ॥ ೫ ॥ ಶ್ರೀಃ ॥

## ೨೮. ರಾಗ ಕಾಂಬೋದಿ, ಅಟತಾಳ.

ವಿಧಿಗೆ ದಯವಿಲ್ಲವಕ್ಕ ಎನ್ನ ಮ್ಯಾಲೆ ॥ ಪಲ್ಲ ॥ ಯದುಪತಿಯು ತೊಲ ಗಲಿಸಿದನೊಮ್ಮೊಮ್ಮೆ ॥ ಅನುಪಲ್ಲ ॥ ಎವೆಯ ಮರೆಯ ಮಾಡಿ

ಹೋದ್ಯಾಕೊ ಎಲೊ ವಿಧಿಯೆ । ಸುಳಿಗುರುಳ ಕಡೆಕಣ್ಣ ನೋಟದಿಂದ ॥ ಖವಕವಿಸಿ ನಗುವ ಮುದ್ದು ಮೊಗವ ನಾನು । ತವಕದಿಂದಲಿ ಮರುಳೆ ನೋಡಧೋದೆ ॥ ೧ ॥ ಹಕ್ಕಿಯ ಮೇಲುಳ್ಳ ದಯವು ಎನ್ನ ಮೇಲೆ। ಇಕ್ಕದೇಕೆ ಹೋದ್ಯೋ ಅಕ್ಕಟಕ್ಕಟ ॥ ಪಕ್ಕ ಎರಡುಳ್ಳಡೆ ಮಧುರಿಗೆ ಪೋಗಿ । ಚಕ್ಕನೆ ಹರಿಯ ಕೂಡೆ ಇಪ್ಪುವೆನಲ್ಲದೆ ॥ ೨ ॥ ತಂಗಿ ನಮ್ಮ ದೆಯು ಕಲ್ಲಾಗಿ ಪೋದವಯ್ಯೊ । ಹೇಂಗೆ ಪೋದನು ಕೇಳು ಶ್ರೀಪತಿ ಎನ್ನಗಲೀ ॥ ರಂಗವಿಟ್ಠಲನ್ನ ಅಂಗವಾ ಬಿಟ್ಟಂಥ । ಭಂಗಜೀವನ ಸುಡು ಸುಡು ನುಡಿವ್ಯಾತಕೆ ॥ ೩ ॥ ಶ್ರೀಃ ॥

## ೨೯. ರಾಗ ಆಹೇರಿ, ಝಂಪೆತಾಳ.

ವನಜನಯನ ನವ ನವ ಮಧುಪನೆಂಬುವರೆ ॥ ಪಲ್ಲ ॥ ಮನದೆ ಗಪ ಮದನ ಪಿತ ವಿಠಲರಾಯಾ ॥ ಅನುಪಲ್ಲ ॥ ಅರಿಯದ ಬಾಲೆಗೆ ತನ್ನ ಪರಿಯನರುಹಿಸಿ ಮುನ್ನೆ । ನೆರದು ಸಖಿ ರತಿಸುಖವ ನೆರೆ ಬೀರಿದಾ ॥ ತೊರದು ಬದುಕುವದೆಂತೊ ರತಿಪತಿಯ ಪಿತನಗಲಿ । ವಿರಹದುರಿಯ ವ್ಯೆಯನಡರಿ ನುಡಿದೆ ॥ ೧ ॥ ಇವನ ಕಪಟದ ವಚನವನು ನಾವು ದಿಟ ವೆಂದು । ನವ ಕುಳಿಕ ಗೀತವನು ಹರಿಣಿಯಂತೆ ॥ ವಿವರವರಿಯದೆ ನಾವು ಕಡುನೊಂದೆವೆಲೆ ಮಧುಪಾ । ಇವರೊಡಲನರಿಯದೆ ಕರುಣಿ ಯೆಂಬುವರೂ ॥ ೨ ॥ ನಡೆ ನಗೆಯ ತುದಿನೋಟ ಬಲೆಯನೆಮ್ಮೊಳು ಬೀಸಿ । ತಡೆಯದೆಮ್ಮನು ವಶವ ಮಾಡಿ ॥ ಪಡಿಯಿಲ್ಲದನುಭವದ ಸುಖದ ಸವಿಯನು ತೋರಿ । ಮಡದಿ ನಡೆಯಳು ಮಧುರೆಯೊಳು ನಲ್ಲನಾ ॥ ೩ ॥ ಪತಿಸುತರು ಧನ ಧಾನ್ಯವನು ಮುನ್ನೆ ನೀಡ್ಯಾಡಿ । ಗತಿ ನಮಗೆ ಅವನೆಂದು ಮನ ಸೋತೆವು ॥ ಕೃತಕವರಿಯದೆ ನಮ್ಮ ನೆರೆಬಿಟ್ಟನೆ ಶ್ರೀ । ಪತಿಯೊಡನೆ ಪಂಥ ನಾವೆಂತು ಮಧುಪಾ ॥ ೪ ॥ ಎಂದೆಂದು ನಿಮ್ಮಗಲೆನೆಂದು ಅಭಯವನಿತ್ತು । ಇಂದುಮುಖಿಯರ ಕೂಡಿ ನೆರೆ ಮಿರಿದಾ ॥ ನಂದನಂದನ ನಮ್ಮ ಕಾನನದೊಳೀಡ್ಯಾಡಿ । ಇಂದು ಮಧುರಿಯ ನಾರಿಯರ ಮೆಚ್ಚಿದಾ ॥ ೫ ॥ ಮರುಳುಗಳು ನಾವು ಶ್ರೀ

ಪತಿಯ ಕೂಟವ ಬಯಸಿ । ಇರುಳು ಹಗಲಾಗಿ ಕುದಿಯುತಲಿ ಬಿರಿಯುತ್ತ ॥ ಸಿರಿಯವನುಂಗುಟದುಗುರ ಕೊನೆಯ ಕಾಣದಿರೆ । ಹರಿ ನಮ್ಮನೆರದುದಾಶ್ಚರ್ಯ ಜಗದಿ ॥ ೬ ॥ ತುಂಗ ಗುಣಗಣ ನಿಲಯ ಅಂಗಜಜನಕ ಶ್ರೀ । ರಂಗನಿಗೆ ಮನಸೋತು ಮರುಳಾದೆವೊ ॥ ಹೀಂಗೆ ಬದುಕುವದೆಂತೊ ಭೃಂಗ ಮಧುರಿಗೆ ಪೋಗಿ । ರಂಗ ವಿಠ್ಠಲನ ತಂದೆ ಮ್ಮನುಳುಹಲುಬೇಕು ॥ ೭ ॥ ಶ್ರೀಃ ॥

## ಶೃಂಗಾರಪಾರಿಜಾತ.

### ೩೦. ರಾಗ ಮೋಹನ, ಝಂಪೆತಾಳ.

ಮಾನನಿಧಿ ಶ್ರೀಕೃಷ್ಣ ಮಧುರೆಘೋಗುವನಂತೆ । ಏನು ಪಥವಮ್ಮ ನಮಗೆ ॥ ಪಲ್ಲ ॥ ಮಾನವೇನಿದಕೆ ಮಾನಿನಿಯರೆಲ್ಲ ಕೂಡಿ । ಆಣೆಯನು ಕೊಟ್ಟವನ ಅಡ್ಡ ನಿಲಿಸುವ ಬನ್ನಿ ॥ ಅನುಪಲ್ಲ ॥ ಕಳ್ಳತನವೆ ನಮಗಲ್ಲದವ ಸುಳ್ಳು ಯೆಲ್ಲವನು ಬಲ್ಲಿರಮ್ಮ । ಬಿಲದಲೀನಮ್ಮ ಬಿಟ್ಟದೇ ವಳಿತು ವನಜಾಕ್ಷ । ಎಲ್ಲಿಗ್ಯೆದಿದರೆ ನಾವಲ್ಲಿಘೋಗುವ ಬನ್ನಿ ॥ ೧ ॥ ಇಂದುದಯದಿ ಮೊದಲು ಇಂದೀವರಾಕ್ಷಿಯರು ಗೋ । ವಿಂದನಾ ಬಳಿಗ್ಯೆದುವಾ ॥ ಒಂದು ಕಡೆಯಲಿ ಕುಳಿತು ಅರುಣಾಕ್ಷಿ ಓರ್ವಳೆ ಕೈ । ಯಿಂದಲ್ಲಿಗೆ ಕರಿಸಿ ಕೇಳ್ವನು ಕೇಳ್ವನು ॥ ೨ ॥ ಹರಿಣಾಂಕ ವದನೆಯರು ನೆರದು ಬರುತಿಹರು ಕೇಳಿ । ಪರಮ ಹರುಷದಲಿ ಬಂದೂ । ಸರಿರಾತ್ರಿಯಲಿ ಹೋಗಿ ಬರುವೆನೆಂದೆನಲಾಗಿ । ಯೆರಗಿ ಬಿನ್ನೈಸಿದರು ಅಂಬುಜ ದಳಾಕ್ಷನಿಗೆ ॥ ೩ ॥

ಶ್ಲೋಕ ॥ ಹಲವು ಕಾಲವು ನಿನ್ನ ಸ್ನೇಹ ಸುಖವಾ ಹಾರೈಸಿಕೊಂಡಿರುತಿಪ್ಪ । ಲಲನಾವ್ಯೂಹವ ಬಿಟ್ಟ ಕ್ರೂರನೊಡನೆ ನೀ ಮಧುರೆಗೆ ಪೋದಡೆ । ಕವಿತಾರಾಭವೆ ಕಾಂತ ಕೇಳು ದಿನವಾ ಆ ಕಂತುವಿನ ಬಾಧೆಗೆ । ಘಳಿಗೊಂದು ಯುಗವಾಗಿ ತೋರುತಲಿದೆ ಜಲಜಾಕ್ಷ ನೀನಿಲ್ಲದೆ ॥ ೧ ॥

**ಪದ** ॥ ಬೇಡ ಮಧುರಿಗೆ ಪೋಗಬೇಡೆಲವೊ ಶ್ರೀಕೃಷ್ಣ । ಬೇಡಿಕೊಂಬೆವೊ ದೈನ್ಯದಿ ॥ ನೋಡು ನಮ್ಮಲಿ ದಯಮಾಡು ಮದನಂಗೆ ಗುರಿ । ಮಾಡುವದು ಉಚಿತವೆಲೊ ಮಾಧವ ಕೃಪಾಕರನೆ ॥ ೧ ॥

**ಶ್ಲೋಕ** ॥ ಬಾಲಭಾವದಲಿದ್ದಾಲಿಂಗ ಸುಖವ ಬಹು ಬಗೆಯಲಿಂದುಳುಹಿದಾ । ಲೋಲಲೋಚನೆ ನಿಮ್ಮ ಬಿಟ್ಟು ಪುರದಾ ಬಾಲೇರಿಗಾನೊಲಿದರೆ । ನೀಲಕಂಠನು ನೆಚ್ಚನೋಡು ನಿಜವಾ ನಿಮಗೇತಕೀ ಸಂಶಯ । ಕಾಲಕ್ಷೇಪವನಲ್ಲಿ ಮಾಡೆ ಕಿಂಚಿತ್ಕಾಲದೊಳಾನೈದುವೆ ॥ ೨ ॥

**ಪದ** ॥ ಪಾಲಿಸುವುದಪ್ಪಣೆಯ ಪಾಟಲಸುಗಂಧಿಯರೇ । ಕಾಲಹರಣವ ಮಾಡದೆ ॥ ನಾಳೆ ಉದಯಕೆ ಪೋಗಿ ನಾಲ್ಕೆಂಟು ದಿನದೊಳಾ । ವೇಳೆಗಿಲ್ಲಿಗೆ ಬರುವೆ ಕಾಳಾಹಿವೇಣಿಯರೇ ॥ ೨ ॥

**ಶ್ಲೋಕ** ॥ ಮಾರನಯ್ಯನೆ ಕೇಳು ಅಲ್ಲಿರುತಿಪ್ಪ ನಾರೇರು ಬಲು ನಿಪುಣರೊ । ನೀರಜಾಂಬಕ ಕೇಳು ನಿನ್ನ ಮನವಾ ನಿಮಿಷಾರ್ಧದೊಳು ಸೆಳವರೆ । ಮಾರಕೇಳಿಯ ಶಾಸ್ತ್ರ ಮರ್ಮವರಿತು ಆ ನಾರಿಯರು ನೆರೆಯಲು । ಗಾರುಹಳ್ಳಿಯಲಿಪ್ಪ ಗೋವಳೆಯರಾ ವಿಚಾರಂಗಳ ಸ್ಮರಿಸೀಯಾ ॥ ೩ ॥

**ಪದ** ॥ ಬಿಲ್ಲ ಹಬ್ಬವೆ ಸುಳ್ಳು ಬಿಸರುಹಾಕ್ಷಿಯರಿಕ್ಷ್ನ । ಬಿಲ್ಲನುತ್ಸಹಕೆ ನಿನ್ನ ॥ ಖುಲ್ಲ ಅಕ್ರೂರನಾ ಕಳುಹಿ ಕರೆಸಿದರು ನೀನಲ್ಲಿ । ವಲ್ಲಭೇರ ನೆರೆದು ನಮ್ಮೆಲ್ಲ ಮರೆವಿಯೊ ॥ ೩ ॥

**ಶ್ಲೋಕ** ॥ ನಾರಿ ಹಾರ ಕಿರೀಟ ಕುಂಡಲಯುಗ ಕೇಯೂರಪರಿಯಾದಿಗಳು । ಚಾರು ವಸ್ತ್ರ ಸುಗಂಧಪುಷ್ಪ ನಿಚ್ಚ ಹಾರಂಗಳಂ ಧರಿಸಿದೇ ॥ ಮಾರಕೇಳಿಯ ಮಾತಿಲಿಂದವರಾ ಮನಸೆಮ್ಮಲೊಂದಾಗದೆ । ನಾರೇರೊಲುಮೆಯುಂಟೆ ಲೋಕದೊಳಗೆ ಇನ್ನೇತಕೆ ದೂರ್ವಿರೇ ॥ ೪ ॥

**ಪದ** ॥ ಮಲ್ಲಯುದ್ಧವ ಕೊಡಬೇಕೆನುತ ಮಾವ ನ । ಮ್ಮಲ್ಲಿಗೆ ಕರೆಸಲದಕೆ ॥ ಇಲ್ಲದಪವಾದ ಈ ಸುಳ್ಳು ಸುದ್ದಿಗಳು ನೀ । ವೆಲ್ಲ ಸೃಜಿಸಿದರೆ ಸರಿಯಿಲ್ಲ ನಿಮಗಿಳೆಯೊಳಗೆ ॥ ೪ ॥

ಶ್ಲೋಕ ॥ ಪತಿ ಸುತ ಪಿತೃ ಮುಖ್ಯ ಭ್ರಾತೃಬಾಂಧವರು ಎಂಬಾ। ಅತಿಶಯ ನಮಗಿಲ್ಲಾ ಲಾಲಿಸೀಮಾತನೆಲ್ಲ ॥ ರತಿಪತಿ ಪಿತ ನೀನೂ ರಾತ್ರಿಯೊಳ್ ಕೊಳಲನೂದೆ । ಕ್ಷಿತಿಪತಿ ನಿನ್ನಡಿಗೆ ಕ್ಷಿಪ್ರದಿಂ ಬಂದೆವೆಂದು ॥ ೫ ॥

ಪದ ॥ ಬಾಲತನದಲಿ ರವಿಜ ತೀರದಲಿ ನೀ ವತ್ಸ । ಪಾಲನೆಯ ಮಾಡುತಿಪ್ಪಾ ॥ ಕಾಲ ಮೊದಲಾಗಿ ಈ ವೇಳೆ ಪರಿಯಂತರವೂ । ಆಲಯವಗಲಿರುವ ಕಾಂತೆಯರ ತ್ಯಜಿಸಿನ್ನು ॥ ೫ ॥

ಶ್ಲೋಕ ॥ ನೀಲಕುಂತಳೆ ಕೇಳು ನಿಮ್ಮ ಮನೆಯ ಆ ನೆಲವಿನ ಮೇಲಿನ । ಪಾಲು ಬೆಣ್ಣೆಯ ಕದ್ದು ಮೆದ್ದು ಬಹಳ ಕಾಲಗಳನೆ ಕಳೆದನೆ ॥ ಬಾಲೆ ಮನ್ಮಥ ಬಾಣವೆತ್ತುತವನೆ ಬಹು ಬಗೆಯಲಿಂದುಳುಹಿದಾ ॥ ಲೋಲಲೋಚನೆ ನಿಮ್ಮೊಳಾಸು ಬಹಳ ಜಾಲಂಗಳ ಮಾಳ್ಪನೆ ॥ ೬ ॥

ಪದ ॥ ಬಟ್ಟುಕಂಗಳೆ ನಿಮ್ಮ ಬಿಟ್ಟು ಘಳಿಗಿರಲಾರೆ । ದುಷ್ಟಕಂಸನು ಕರೆಸಲವಕೆ ॥ ಅಟ್ಟಿ ಪೋಗದಲಿರೆ ಶಿಟ್ಟಿನಿಂದಲಿ ಪ್ರಜಕೆ । ಅಟ್ಟುಳಿಯ ಮಾಡುವನು ಅಂಬುಜಕಂಠಿಯರೇ ॥ ೬ ॥

ಶ್ಲೋಕ ॥ ವಾರಿಜೋದ್ಭವನಯ್ಯ ನಿನ್ನ ವಿರಹ ವಾರಾಶಿಯೊಳೆ ಮುಳುಗಿಪ್ಪಾ । ವಾರಿವಾಹನಿಭಾಂಗ ವಾಸವನುತ ವಾಕೆಮ್ಮ ದೊಂದಾಲಿಸೋ ॥ ವಾರಿಜಾಂಬಕ ವಾರಿಜಾರಿವದನ ವಾರಾಶಿಜಾ ವಲ್ಲಭಾ । ವಾರಿಧಿಶಯ ಪಾರಗಾಣಿಸೊ ಕೃಪಾ ನಾವೆಯಲಿಂದೆಮ್ಮನೂ ॥ ೭ ॥

ಪದ ॥ ಮಾರನೆಂಬುವ ಬಲು ಕ್ರೂರ ನಮ್ಮಗಲಿಸಿ । ಊರಿಗೆ ಹೋದದನು ಕೇಳಿ ॥ ವಾರಿಜಾಸ್ತ್ರವನೆ ಎದೆಗೇರಿ ನಮ್ಮನು ಬಿಡದೆ । ಹೋರುವನಹೋರಾತ್ರಿಯಲಿ ಚರಿಸುತಾ ॥ ೭ ॥

ಶ್ಲೋಕ ॥ ಪರಿಪರಿಯಲಿ ನಿಮ್ಮ ಪಾಡನೆ ಕೇಳಿ ಮುನ್ನಾ । ಕರುಣವು ನಿಮಗಿಲ್ಲ ಕಾಂತೆ ಕೇಳೆಮ್ಮ ಸೊಲ್ಲಾ ॥ ತ್ವರಿತದಿ ಬರದಿಲ್ಲೆ ತಡೆದು ನಾನಿರಲು ಅಲ್ಲೆ । ಸರಸಿಜಭವ ಮಾರನಾಣೆ ಕೇಳೆ ಪ್ರವೀಣೆ ॥ ೮ ॥

**ಪದ** ॥ ಹರಿಣಾಂಕ ವದನೆಯರು ಹರುಷಪೂರಿತರಾಗಿ । ಕರೆದು ತಾಂಬೂಲವಿತ್ತು ॥ ಕಳುಹಿರೆನ್ನನು ನಿಮ್ಮ ಕೃತುಕಾಲಕೇ ಬಂದು । ನೆರೆಯದಿದ್ದರೆ ನಾನು ಪರಪು ಪುರುಷನೆ ಕೇಳಿ ॥ ೮ ॥

**ಶ್ಲೋಕ** ॥ **ಮಾರನೆಂಬವ** ಸುಡಿದು ಪೋದ ಶಿವನಾ ಆ ಮೂರನೆ ಕಣ್ಣಿನಿಂದಾ । ನಾರರಿಲ್ಲದ ನಾಭಿಯಿಂದ ಪಡೆದ ತಾ ಬ್ರಹ್ಮನೆಂಬಾತನಾ ॥ ನಾರಿಯರ್ಗೆ ಕುಮಾರರಾಣೆ ಹರಿಯು ಸೇರಿ ನಿಲ್ವುದು ಎಂತೆನೆ । **ಮಾರಿ** ಹೊರಗಿನಹೊರಗೆ ಹೋಯಿತೆಂಬನ ತಿರಿಗಿರೆ ಭಾಮಿನೀ ॥ ೯ ॥

**ಪದ** ॥ ಹಲವು ಮಾತುಗಳೇಕೆ ಜಲಜಾಕ್ಷಿ ನಿಮ್ಮ ಪದ । ನಳಿನವನು ನೆರೆನಂಬಿಹಾ ॥ ಬಲುಮೆಯಿಂದಿರುತಿಪ್ಪ ಲಲನಾವ್ಯೂಹವ ಬಿಟ್ಟು । ಸಲಹೊ ಬಾಹೆಮ್ಮನು ರಂಗವಿಠ್ಠಲರೇಯಾ ॥ ೯ ॥ ಶ್ರೀಃ ॥

॥ **ಶ್ರೀಮಧ್ವೇಶಾರ್ಪಣಮಸ್ತು** ॥

೩೧. ರಾಗ ಕಲ್ಯಾಣಿ, ಅಟತಾಳ.

ಏನಮ್ಮ ಕಲ್ಲಬಿಡೆ । ಈ ಧೋತ್ರವ । ಚನ್ನಾಗಿ ಒಗಿಯಬೇಕು ॥ ಪಲ್ಲ ॥ ಚನ್ನಕೇಶವನ ಪ್ರಸಾದ ಸಮಯಕ್ಕೆ । ಇನ್ನು ದ್ವಾದಶಿ ಪಾರಣೆ ವೇಳೆ ಮೀರಿತು ॥ ಅನುಪಲ್ಲ ॥ ವೇದವನೋದಬೇಕು । ಷಡ್ವರ್ಗದ । ಭೇದವ ತಿಳಿಯಬೇಕು ॥ ಮದಕು ಹೋಗುವ ಉಪಾಯದ ತೆರನೀಗಿ । ಕುಟ್ಟಿ ಜಲದೊಳು ಶೆಳೆದು ಒಗಿಯಬೇಕು ॥ ೧ ॥ ಉಟ್ಟ ಧೋತರವೊಳಿಸದ । ಅಂಗದೊಳುಳ್ಳ । ದುಷ್ಟರು ಐವರಿಂದ ॥ ಕುಷ್ಟುಹೋಗುವ ಉಪಾಯ ತೆರನೀಗಿ । ಕುಟ್ಟಿ ಜಲದೊಳು ಶೆಳದು ಒಗೆಯಬೇಕು ॥ ೨ ॥ ಬೇಲೂರ ಪುರಿ ಚನ್ನಾನ । ಸೇವೆಗೆ ನೀನು । ಆಲಸ್ಯವನು ಮಾಡದೆ ॥ ಕಾಲಾವಿಾರಿದರೆ ರಂಗವಿಠಲ ಬೈವಾ । ನೀಲಕುಂತಳೆ ಕಲ್ಲಬಿಟ್ಟು ಕಡೆಗೆ ಸಾರೆ ॥ ೩ ॥ ಶ್ರೀಃ ॥

# ಭ್ರಮರಗೀತಾ.

## ೩೨. ರಾಗ ಮುಖಾರಿ, ಅಟತಾಳ.

ಭೃಂಗಾ ನಿನ್ನಟ್ಟಿದನೆ ಶ್ರೀ । ರಂಗ ಮಧುರೆಲಿ ನಿಂತು । ಅಂಗಜ ಲುಬ್ಧಕ । ಪೊಂಗೊಳಲ ತಡೆಯನಿಕ್ಕಿ ॥ ಅಂಗನೇರೆಂಬ ಹುಲ್ಲೆ ಮೃ । ಗಂಗಾಳಿಗೆ ಗುರಿಹಚ್ಚಿ । ಹಿಂಗಿಸುತ್ತೈದಾನೆ ಅಸುವಾ । ಹೇ ಕಿತವಾ ॥ ॥ ಪಲ್ಲ ॥ ನಿನ್ನ ನೋಡೆ ನಮ್ಮ ಅಚ್ಯು । ತನ್ನ ಕಂಡಂತಾಯಿತಯ್ಯೊ । ಚನ್ನಿಗರರಸ ಕುಶ । ಲೋನ್ನತಿಯೊಳಿಹನೇನೋ ॥ ಚಿಸ್ನತನ ಮೊದ ಲಾಗ್ಯಾ । ಪನ್ನಕಿತವ ಬಲ್ಲೆವೊ । ನನ್ನಿಗಾರಚಿತ್ತ ಚೋ । ರನ್ನ ಶ್ರೀ ಹರಿಯಾ ॥ ಮನ್ನಣೆಗೆ ಮೆಚ್ಚಿ ತನು । ವನ್ನೊಪ್ಪಿಸಿದ ಮುಗುಧ । ವೆಣ್ಣು ಗಳ ವಿರಹಾಬ್ಧಿ । ಯನ್ನೆ ದಾಟಿಸುವೆನೆಂದು ॥ ತನ್ನ ನೇಹವೆಂಬ ನಾವೆ । ಯನ್ನೇರಿಸಿ ಮೋಸದಿ ನಡು ನೀರೊಳು ತೊರಧೋದನೆ । ಹೇ ಕಿತವಾ ॥ ೧ ॥ ತಮ್ಮ ನಂದಗೋಪ ಯಶೋ । ದ್ಯಮ್ಮನ ಕಂಡು ಬಾರೆಂದು । ರಮ್ಮೆಯ ರಮಣ ನಿನ್ನ । ಒಮ್ಮೆ ಕಳುಹಿದನೇನೊ ॥ ಹಮ್ಮು ಗೆಟ್ಟ ರಮ್ಮಣೇರಂ । ದುಮ್ಮಳಿಸಿದೆವೊ ವೃಥಾ । ನಮ್ಮ ಹಂಬಲಿನ್ನೇ ನವಗೆ । ಶ್ರೀಹರಿಗೆ ॥ ಹೊಮ್ಮೇಲಟ್ಟಾದಲಂಚೆಯ । ಗಮ್ಮನೇರ ಕುಚದ ಕುಂ । ಕುಮ್ಮ ಕಸ್ತೂರಿಯ ಕರ । ದಿಮ್ಮದಿ ಪಿಲುಕಿದಂಗೆ । ಕಮ್ಮಗೋಲನ ಬಾಣಂಗಾ । ಳುಮ್ಮಳಿಸಿ ಈಸುತಿದೆ । ಸುಮ್ಮನೆ ಬಾಹೋದೇ ಸುಲಭ । ಹೇ ಕಿತವಾ ॥ ೨ ॥ ಮಧುಕುಂಜ ವನದಲ್ಲಿ । ಮಧುವೈರಿ ಕೊಳಲೂ ದಲಾ । ಮಧುರಾ ಸುಸ್ವರ ಕೇಳಿ । ಮದಿರಾಕ್ಷೇರೆಲ್ಲರು ಧಾ । ಮದ ಧ್ಯಾನ ಬಿಟ್ಟು ಮೃಗ । ಮದ ಕಂಪವಿಡಿದೈದಿ । ಮದನನಯ್ಯನ ಕಾಣುತ । ಶ್ರೀಹರಿಯಾ ॥ ಮುದವೇರಿ ತಲೆವಾಗಿ । ಮೇದಿನಿ ನಿಟ್ಟಿಸಲಾಗ । ಮೃದು ವಾಕ್ಯದೊಳೆಮ್ಮಪ್ಪಿ ॥ ಅಧರಾಮೃತ ಭೋಜನ । ಕೊದಗುವ ಸತತ ಸ । ನ್ನದ ನಮ್ಮನಗಲಿ ಕ । ಲ್ಲೆದೆಯಾದನೆಂತೊ ಕೃಪಾಳು । ಹೇ ಕಿತವ ॥ ॥ ೩ ॥ ವಜ್ರಾಂಕುಶ ಧ್ವಜಾಂಕಿತ । ಹೆಜ್ಜೆಯನ್ನೆ ತಿಳಿದ ನ । ಮ್ಮಬ್ಜಾಕ್ಷಿ ಯರೊಡನೆ ರತಿ । ಕಜ್ಜದುಪವನದಲ್ಲಿ । ನಿರ್ಜರೋತ್ತಂಸರೊಡನೆ ।

ಮಜ್ಜನ ಕ್ರೀಡ್ಯಾಡುವ ಸಾ । ಯುಜ್ಯ ಸುಖ ಎತ್ತಲಿಪ್ಪದೊ । ಶ್ರೀ ಹರಿಯಾ ॥ ಅಬ್ಜಭವ ಮುನಿಜನ । ಪೂಜ್ಯನಗಲಿದ ಮೇಲೆ । ನಿರ್ಜೀವಿಗಳಾಗಿ ಕಣ್ಣ । ಕಜ್ಜಲ ಕಲಕಿಕೊಂಡು ॥ ಲಜ್ಜೆಗೆಟ್ಟು ತನುವತಿ । ಜಜ್ಜರಿತದಿ ಜೀವಿಸೆ। ವಜ್ರ ಎದೆಯಲ್ಲಾವೆ ನಮ್ಮದೆ। ಹೇ ಕಿತವಾ ॥ ೪ ॥ ಕತ್ತಲೆ ವೈರಿಯು ಬಿಟ್ಟು। ಮುತ್ತಿನ ಜೊಲ್ಲೆದುರುಬಿಲಿ । ಕಸ್ತೂರಿ ತಿಲಕವು ಬಲಿತಾ ಕುಂಡಲ ಬೆಳಗುತಿರೆ । ವೃತ್ತ ವಾರನಾರಿ ಮಂದ । ಸ್ಮಿತ ತಿಂಗಳಿಂದ ಎಮ್ಮಯ । ಹೃತ್ತಾಪವ ಪರಿಹರಿಸುವ ಶ್ರೀಹರಿಯಾ ॥ ಮತ್ತೆ ವಕ್ಷದ ಶ್ರೀವತ್ಸ । ಕೌಸ್ತುಭ ವೈಜಯಂತಿ ಮಾಲೆ। ಶ್ರೀತುಳಸಿ ಘಮುಘಮಿಸುತ್ತಲಿಹ ವನಮಾಲೆಯೂ । ರತುನ ಕಂಕಣ ಭುಜ। ಕೀರ್ತಿಯಿಂದೊಪ್ಪುವ ಪುರು । ಷೋತ್ತಮನ್ನ ಬಣ್ಣಿಪರುಂಟೆ। ಹೇ ಕಿತವಾ ॥ ೫ ॥ ಉತ್ಪಲ ಶಾಮಲ ಮೋದ।ವೆತ್ತ ಭಾವಚನ್ನದಿಂದ। ಅತ್ಯಮ್ಮಲಾ ಪೊನ್ನಂಬರ ಸುತ್ತಿದಡಾ । ಮತ್ತನೂಪುರಾ ಜ। ಣತ್ಕಾರಾದಿ ಮಿಂಚುವ। ಚಿತ್ತ ಶಿಖಿಗೆ ಪೀಯೂಷ। ಸುತ್ತ ಮೇಘನಂತೆ ಒಪ್ಪುವ। ಶ್ರೀಹರಿಯಾ ॥ ಹೆತ್ತ ತಾಯಿ ಆಪ್ತ ಬಂಧು। ಗೋತ್ರಗತಿ ನೀನೇ ನಮ್ಮ। ಚಿತ್ತವೆಂದು ನಂಬಿ ತನ್ನ । ಹತ್ತಿಲಿ ಸಾರಿದವರ । ವತ್ತಿ ತಾ ರಥವನೇರಿ । ಸತ್ವರಾ ಬರುವೆನೆಂದು । ಮತ್ತಕ್ರೂರನೊಡನೈದಿದಾ। ಹೇ ಕಿತವಾ ॥ ೬ ॥ ಲಕ್ಷ್ಮಿ ರಮಣ ನವ। ಸುಕ್ಷ್ಮದ ಗೊಲ್ಲತೆರು ನಾವು । ಕುಕ್ಷಿಯೊಳು ಬೊಮ್ಮಾಂಡವವಗೆ। ಮಕ್ಷಿಕಗಳಂತಿಪ್ಪೆವೊ। ಮೋಕ್ಷಿಗಳರಸನು ಅವ । ಗೋಕ್ಷೀರ ವ್ರತರಾವು। ರಕ್ಷಿಸುವನೆಂತೊ ನಮ್ಮನು। ಶ್ರೀಹರಿಯು ॥ ರಕ್ಷಿಸಲುದಿಸಿ ಜನ। ರಕ್ಷಣೆಗೆ ಪಾಲ್ಬೆಣ್ಣೆಯಾ । ಭಕ್ಷಿಸಿ ನಿರುತಾ ನಮ್ಮ । ಅಕ್ಷಿಗೆ ಹಬ್ಬವನುಣಿಸಿ । ಈ ಕ್ಷೋಣಿ ಭಾರಹಾರ್ಯವು ಶಿಕ್ಷೆಗೇ ನರರಸಾಮ್ಯ । ವಕ್ಷಾಮಾಣರಾದೆ ಮೂರ್ಖರೊ ॥ ಹೇ ಕಿತವಾ ॥ ೭ ॥ ಹಿಂದೆ ಮಾಡಿದ ಸದ್ಧರ್ಮ। ದಿಂದ ಮಧುರ ನಗರದ। ಇಂದೀವರಾಕ್ಷೇರಾನಂದ। ಸಿಂಧು ಉದಿಸಿದ ಪೂರ್ಣ । ಚಂದ್ರನಂತೊಪ್ಪುವ ಸಿರಿ ॥ ಮಂದರಧರನಂಘ್ರಿಯಾ । ಪೊಂದುವ ಭಾಗ್ಯಕ್ಕೆ ಣೆಯುಂಟೇ। ಶ್ರೀಹರಿಯಾ॥ ಅಂದೆಮ್ಮೊಳು ರಾಸಕ್ರೀಡೆ। ಯಿಂದ ಬಂದ

ಪರಾಧವ । ಒಂದನೆಣಿಸದೆ ಸಲ । ಹೆಂದು ಬಿನ್ನೈಸಿ ಸಾಷ್ಟಾಂಗ । ದಿಂದ ವಂದಿಪೆವು ಭಕ್ತ । ಬಂಧುವಿಗೆ ಯೆಮ್ಮ ಹೃದಯ । ಮಂದಿರ ಪೊಳೆಂದೆಂದಿರೆಂದು । ಹೇ ಕಿತವಾ ॥ ೮ ॥ ಹೆಂಗಳೆರೊಂದಾಗಿ ಅಂತ । ರಂಗದರಸನಾಡಿದ । ಮಂಗಳ ಚರಿತ್ರೆಯನ್ನು । ಸಂಗೀತದಿಂ ಪೊಗಳುತ್ತ । ಕಂಗಾಳು ಶೃಂಗಾಳುವುತ್ತ । ಇಂಗಿತಜ್ಞ ದೇವಾ । ನಂಗಸಂಗದಾನಂದವ ನೆಗದು । ಶ್ರೀಹರಿಯು ॥ ಮಂಗಳ ವೇದಸ್ತ್ರೀಯನಾರಿ । ಶೃಂಗಾರಕೂರುವೂ ನಮ್ಮ । ಪೊಂಗಣ್ಣಿನ ಶೀಲ್ದ ನರ । ಸಿಂಗ ವಟು ಭಾರ್ಗವನೆ । ಅಂಗದ ಪಾರ್ಥಪಶಂಭು ತು । ರಂಗಾಪ ರಂಗವಿಠಲ । ಹಿಂಗಿಸುವದೆಂತು ಯೆಮ್ಮೊಳು । ತುಂಗ ಮಹಿಮ ನಮೊ ಎಂಬೆ । ಹೇ ಕಿತವಾ ॥ ೯ ॥

## ೩೩. ರಾಗ ಆಹೇರಿ, ಅಟತಾಳ.

ಒಲ್ಲೆವ್ವ ಲಕುಮಿಯ । ನಲ್ಲ ಬಾರದಿದ್ದರೆ ತನುಹೊರೆ ॥ ಪಲ್ಲ ॥ ಹಾರಕೊರಳಾಗೆ ಭಾರ ಹುವ್ವಿನಸರ ಸೈರಿಸಲಾರೆನೆ ॥ ಮಾರನಯ್ಯನು ಬಾರದಿದ್ದರೆ । ಮಾರನಂಬಿಗೆ ಗುರಿಮಾಡೆ ॥ ೧ ॥ ಎಲ್ಲ ದೇವರ ವಲ್ಲಭನೆಂದು । ವಲ್ಲಿದೆ ಮನ ನಿಲ್ಲದೆ ॥ ನಿಲ್ಲದೆ ರಂಗ ಪೋದ ಮಧುರಿಗೆ । ಬಿಲ್ಲಹಬ್ಬದ ನೆವದಿಂದ ॥ ೨ ॥ ಮುನ್ನಾ ಆಡಿದ ಮಾತ ನೋಡೋ ಸು । ವರ್ಣದೊಳಗೆಲ್ಲ ಈಡ್ಯಾಡಿ ॥ ವನ್ನಜಾಕ್ಷನು ಬಾರಾಪುರದ । ವನ್ನಿತೆಯರನು ಮೆಚ್ಚಿ ॥ ೩ ॥ ಮಂದಾನಿಲ ಸೊಬಗು ತರುಣಿಯೊ । ಳೆಂದಾನಗಧರನೆಂದು । ವಂದೆ ಶಕುನ ಕಂಗಳ ನೋಟಕ್ಕೆ । ವೃಂದಾವನಪತಿ ಅಗಲಿದಾ ॥ ೪ ॥ ಪೊಂಗೊಳಲಾ ಧ್ವನಿಗೆ ಸಿಲ್ಕಿ ಭಂಗಬಟ್ಟೆ ನಂಗಜನಿಂದಲಿ ॥ ಪೆಂಗಳಿಗುಚಿತವಲ್ಲ । ರಂಗವಿಠಲನ ತೋರದಿದ್ದಡೆ ॥ ೫ ॥ ಶ್ರೀ ॥

## ೩೪. ರಾಗ ಮಾಯಾಮಾಳವ, ಅಟತಾಳ.

ಕಂಬು ಕೊಳಲನೂದುತ । ನಂಬಿಸಿ ಪೋದನೆಯವ್ವ । ಅಂಬುಜನಾಭಗೆ ಮನ । ಹಂಬಲಿಸುತ್ತಿದೆಯವ್ವ ॥ ಪಲ್ಲ ॥ ಮನೆಮನೆ ವಾರತೆಗೆ । ಮನವೆಳಸದೆಯವ್ವ । ಮನಸಿಜ ಪಿತನೊಡನೆ । ಮನತೆರಳಿತೆಯವ್ವ ॥ ೧ ॥

ನಡೆಯಲಾರೆವೆ ನಾವು ಒಂ। ದಡಿಯಿಡೆವಶವಿಲ್ಲ॥ ಇಂಥ। ಬೆಡಗುಗಾರನ ಕೂಡೆ। ನುಡಿತೆರಳಿತೆಯವ್ವ ॥ ೨ ॥ ಮಾತು ಮನಸು ಬಾರದು । ಕಾತರಿ ಸುತಿದೆ ಮನ ॥ ಪ್ರೀತಿವಂತನ ಕಾಣದೆ । ನಾ ತಾಳಲಾರೆನವ್ವ ॥ ೩ ॥ ನಿನ್ನೆ ವೊದಲಾಗಿ ಯೆನ್ನ । ಕಣ್ಣಿಗೆ ನಿದ್ರೆಬಾರದು ॥ ಬನ್ನಣೆಗಾರನ ಕೂಡೆ । ಹೆಣ್ಣುಜನ್ಮ ಸಾಕೆಯವ್ವ ॥ ೪ ॥ ಗೋಪಿಸಾಥನ ಕಾಣದೆ । ತಾಪ ಘನವಾಯಿತವ್ವ ॥ ಗೋಪಜನರ ಕೂಡಿದ । ಶ್ರೀಪತಿ ರಂಗವಿಠ್ಠಲ ॥ ೫ ॥

## ೩೫. ರಾಗ ಕರಹರಪ್ರಿಯ, ಅಟತಾಳ.

ನಂದನಂದನ ಪಾಹಿ ಗುಣವೃಂದ । ಸುಂದರರೂಪ ಗೋವಿಂದ ಮುಕುಂದ ॥ ಪಲ್ಲ ॥ ಪವನಜಪರಿವಾರ ಯಮುನಾವಿಹಾರ । ನವರತ್ನ ಹಾರ ನವನೀತಚೋರ ॥ ೧ ॥ ದಿನಕರದ್ಯುತಿಜಾಲ ಕನಕಾಮಯ ಚೇಲ ॥ ಜನಕಾನುಕೂಲ ಜನಕಜಾಲೋಲ ॥ ೨ ॥ ತುಂಗ ವಿಹಂಗ ತುರಂಗ ದಯಾಪಾಂಗ ॥ ರಂಗವಿಠಲ ಭವಭಂಗ ಶುಭಾಂಗ ॥ ೩ ॥

## ॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೬. ರಾಗ ಕಾಂಬೋಧಿ, ಝಂಪೆತಾಳ.

ಅಕಟಕಟ ಸಂಸಾರವನು ನೆಚ್ಚಿ ಕೆಡಬೇಡಾ ॥ ಪಲ್ಲ ॥ ವಿಕಟದಲಿ ಮಾನವರು ಕೆಟ್ಟರೆಲ್ಲರು ನಿಜಾ ॥ ಅನುಪಲ್ಲ ॥ ಮುನ್ನೆ ನರಕಾಸುರನು ಬಡಿದು ಚಿಂತಾಮಣಿಯ । ತನ್ನ ಮನೆಯಲಿ ತಂದು ನಿಲಿಸೆ ನೃಪರಾ ॥ ಕನ್ನೆಯರ ಷೋಡಶಸಹಸ್ರವನೆ ತಂದಾತ। ಹೆಣ್ಣನೊಬ್ಬಳನೊಯ್ದುದಿಲ್ಲ ನೋಡೋ ॥ ೧ ॥ ಕೌರವರು ಧರೆಯೆಲ್ಲ ತನಗಾಗ ಬೇಕೆಂದು । ವೀರ ಪಾಂಡವರೊಡನೆ ಕದನ ಮಾಡಿ॥ ಮಾರಿಯಾ ವಶವಯ್ದಿ ಪೋಪಾಗ ತನ್ನೊಡನೆ । ಸಿರಿಯು ಭೂಮಿಯು ವಯ್ದುದಿಲ್ಲ ನೋಡೊ ॥ ೨ ॥ ಸಾವಿರ ಕರವಪಡೆದ ಕಾರ್ತವೀರ್ಯಾರ್ಜುನನು। ಭುವನದೊಳಗೊಬ್ಬನೆ ವೀರನೆನಿಸಿ ॥ ರಾವಣನ ಸೆರೆ ಇಟ್ಟ ಕಾಮಧೇನುವ ಬಯಸಿ । ಆವಾಗಲೇನು

ಕೊಂಡೊಯ್ದ ನೋಡೋ ॥ ೩ ॥ ಪರಮ ತಪವನೆ ಮಾಡಿ ನಹುಷ ಸುರಪತಿಯೆನಿಸಿ । ವರಮುನಿಗಳ ಕೈಲೆ ದಂಡಿಗೆಯ ಪೊರಿಸಿ ॥ ಉರಗ ಜನುಮವನೈದಿ ಹೋಹಾಗ ತನ್ನೊಡನೆ । ಸುರಲೋಕದೊಳಗಿನ್ನೇನಾದ ನೋಡೋ ॥ ೪ ॥ ತುಂಗಗುಣ ಧ್ರುವ ವಿಭೀಷಣ ಹನುಮಾದಿಗಳು । ಮಂಗಳಾತ್ಮಕ ಹರಿಯನರಿತು ಭಜಿಸಿ ॥ ಭಂಗವಿಲ್ಲದೆ ಹೊರೆದು ಸಕಲ ಸೌಭಾಗ್ಯವನು । ರಂಗವಿಟ್ಠಲರೇಯನ ನೆರೆನಂಬಿರೊ ॥ ೫ ॥ ಶ್ರೀಃ ॥

## ೩೭. ರಾಗ ಭೈರವಿ, ಆದಿತಾಳ.

ನೀನೇ ಬಲ್ಲಿದನೊ ರಂಗ । ನಿನ್ನ ದಾಸರು ಬಲ್ಲಿದರೋ ॥ ಪಲ್ಲ ॥ ನಾನಾ ತೆರದಿ ನೀಧ್ಯಾನಿಸಿ ನೋಡಲು । ನೀನೆ ಭಕತರಾಧೀನನಾದ ಮೇಲೆ ॥ ॥ ಅನುಪಲ್ಲ ॥ ಪರಮಪುರುಷ ಪರಬ್ರಹ್ಮನೆಂದೆನುತಲಿ । ನಿರುತದಿ ಶ್ರುತಿಯು ಕೊಂಡಾಡಲೂ ನಿನ್ನನೂ ॥ ನರ ಧರ್ಮಜನರಮನೆಯ ಒಳಗೇನೆಂ । ಧರುಷದಿಂದ ಕರೆವಲ್ಲಿ ಪೋದಮೇಲೆ ॥ ೧ ॥ ಜಲಜಭವಾಂಡದೊಡೆಯನೆಂದೆನಿಸುವ । ಬಲುಬಲು ದೊಡ್ಡವನಹುದಹುದಾದಡೆ ॥ ಒಲಿದಡೆ ಸದ್ಗತಿ ನೀವೆ ಅನುದಿನ । ಬಲಿಯ ಮನೆಯ ಬಾಗಿಲ ಕಾಯ್ದ ಮೇಲೆ ॥ ೨ ॥ ಖ್ಯಾತಿಯಿಂದ ಪುರುಹೂತ ಸಹಿತ ಸುರ । ವ್ರಾತವು ನಿನ್ನನು ಓಲೈಸುತಿರೆ ॥ ಭೂತಳದೊಳು ಸಂಪ್ರೀತಿಯಿಂದಲಿ । ಪಾರ್ಥನ ರಥಕೆ ನೀ ಸೂತನಾದಮೇಲೆ ॥ ೩ ॥ ಧುರದೊಳು ಪಣೆಯನೆ ಹೊಡೆದ ಭೀಷ್ಮನ । ಮರಳಿಪುದೆನುತಲಿ ಚಕ್ರವ ಪಿಡಿಯಲು ॥ ಹರಿನಿನ್ನ ನಾಮದ ಜೋಡು ತೊಟ್ಟಿರಲವ । ನಿರವ ಕಂಡು ಸುಮ್ಮನೆ ತಿರುಗಿದಮೇಲೆ ॥ ೪ ॥ ತರಳಗೋಸುಗ ಒಡೆದು ಕಂಬದಿ ಬಂದು । ನರಮೃಗವೇಷದಿ ಭಕತರ ಸ್ಥಿತಿಗತಿ ॥ ಕರುಣದಿ ಸಲಹೊ ಶ್ರೀರಂಗವಿಟ್ಠಲ ನಿನ್ನ । ಸ್ಮರಿಸರ ಮನದಲಿ ಸೆರೆಯುಸಿಕ್ಕಿದ ಮೇಲೆ ॥ ೫ ॥

## ೩೮. ರಾಗ ಮಧ್ಯಮಾವತಿ, ಅಟತಾಳ.

ಕಂಜನೇತ್ರೆ ಶುಭ ಮಂಜುಳಗಾತ್ರೆ । ಕುಂಜರದಂತಿ ಗಮನೆ । ರಂಜಿತಾಂಗಿ ನಿರಂಜನಾಂಗಿ ॥ ಪಲ್ಲ ॥ ಧರೆಯಮೇಲೆ ಹಿರಿಯಳು ನಾ ।

ನಿರಲು ಲಜ್ಜೆ । ತೊರದು ನೀನು ॥ ಸರಸವಾಡೋರೆ ಮುರಹರನ । ಕರೆದು ಭಾಮಿನಿ ಸುಗುಣೆ ಕಾಮಿನಿ ॥ ೧ ॥ ಪತಿಯು ಪ್ರೀತಿಯಿಂದ ಎನ್ನ ಮೇಲೆ । ಅತಿಶಯು ಇರಲು ಜ್ಯೇಷ್ಠ ॥ ಸತಿಯಳೇನೆನು ನೀನು ನೋಡು । ಮತಿಯು ರುಗ್ಮಿಣಿ ಸುಪದ್ಮಗಂಧಿನೀ ॥ ೨ ॥ ಒಂದು ಕಾಲದಲ್ಲಿ ದಾಸಿ । ಯಿಂದ ಪತಿಯುು ಸರಸವಾಡಲು ॥ ಬಂದಳೇನೆ ಅರಸಿ ಸಮ । ಳೆಂದು ಭಾಮಿನಿ ಸುಗುಣೆ ಕಾಮಿನೀ ॥ ೩ ॥ ದಾಸಿನಾಮಳು ನಾನು ಅಲ್ಲ । ವೇಶಮಾತನಾಡಬೇಡ ॥ ಶ್ರೀಶನ ದಯ ರಾಶಿ ಇರಲು । ದಾಸಿ ರುಗ್ಮಿಣಿ ಸುಪದ್ಮ ಗಂಧಿನಿ ॥ ೪ ॥ ಸಾರೆ ಕೃತ್ಯ ವಾರೆಮಾಡಿ । ದ್ವಾರಾವತಿಯಿಂದ ಎನ್ನ ॥ ಸಾರೆ ಬಂದ ಪ್ರೀತಿಯುು ಆ । ಹಾರೆ ಭಾಮಿನಿ ಸುಗುಣೆ ಕಾಮಿನಿ ॥ ೫ ॥ ಕಡಲಶಾಯಿ ತಡೆದರಿನ್ನು । ದಿಡುಗು ದೇಹ ಬಿಡುವೆ ನೆಂಬೊ ॥ ನುಡಿಯ ಕೇಳಿ ಪಿಡಿದನೆ । ಬಿಡದೆ ರುಗ್ಮಿಣಿ ಸುಪದ್ಮ ಗಂಧಿನಿ ॥ ॥ ೬ ॥ ಮಂದರಧರ ಪ್ರೀತಿಯು । ಲಿಂದೆ ನಿನ್ನ ಪಡೆದನೇನೆ ॥ ಒಂದು ಮಣಿಯ ಕಾರಣದ । ಲಿಂದೆ ಭಾಮಿನಿ ಸುಗುಣೆ ಕಾಮಿನಿ ॥ ೭ ॥ ಸುಮ್ಮನೆ ಬಂದವಳಿಗೆ । ಬ್ರಹ್ಮ ಲಗ್ನದಿ ಬಂದೆನಗೆ ॥ ಸಾಮ್ಯವೇನೆ ಯಾಕೆ ನಿನಗೆ । ಹೆಮ್ಮೆ ರುಗ್ಮಿಣಿ ಸುಪದ್ಮ ಗಂಧಿನೀ ॥ ೮ ॥ ಮಾನಾದಿ ಭಕ್ತಿಯುು ಕನ್ಯಾ । ದಾನವು ಲೋಕದೊಳಗುಂಟು ॥ ಏನು ನಿನ್ನ ತಾತಾ ಕೊಟ್ಟ । ದೀನ ಭಾಮಿನಿ ಸುಗುಣೆ ಕಾಮಿನಿ ॥ ೯ ॥ ಎನ್ನ ಹಾಗಾದೆಂದು । ಚನ್ನ ಕೇಳಿ ಶತಧನ್ವನ ॥ ಬೆನ್ನಟ್ಟಿ ಕೊಂದಾನೆ ನಿ । ಚ್ಚನ್ನ ರುಗ್ಮಿಣಿ ಸುಪದ್ಮ ಗಂಧಿನಿ ॥ ೧೦ ॥ ನೀತಿ ಅರಸರ ಸ್ವಭಾವ । ಚೋರರ ಕೊಲ್ಲಬೇಕೆಂಬೊ ॥ ಸಾರಪ್ರೀತಿಯುದರಿಂದ । ತಾರೆ ಭಾಮಿನಿ ಸುಗುಣೆ ಕಾಮಿನಿ ॥ ೧೧ ॥ ಇಂದ್ರಾದಿದೇವತೆಗಳಿಂದ । ಸಾಂದ್ರಯುುದ್ಧವನ್ನೆ ಮಾಡಿ ॥ ವೀಂದ್ರ ಎನಗೆ ಪಾರಿಜಾತ । ತಂದ ರುಗ್ಮಿಣಿ ಸುಪದ್ಮ ಗಂಧಿನೀ ॥ ೧೨ ॥ ವರದ ರಂಗ ಕರದೊಳಿನ್ನ । ಸುರ ವೃಕ್ಷಪುಷ್ಪಿರಲು ನಿನ್ನ ॥ ತ್ವರೆಕ್ಲೇಶನೋಡಿ ತಂದ । ತರುವ ಭಾಮಿನಿ ಸುಗುಣೆ ಕಾಮಿನಿ ॥ ೧೩ ॥ ನಿಜಳೆಂದು ರಂಗನು ಎನ್ನ । ವಿಜಯ ಯಾತ್ರೆಯಲ್ಲಿ ತನ್ನ । ಭುಜಗಳಿಂದ ಆಲಿಂಗಿಸೀದ । ಸುಜನೆ ರುಗ್ಮಿಣಿ ಸುಪದ್ಮ ಗಂಧಿನೀ ॥ ೧೪ ॥ ಅರಸರ ಸ್ವಭಾವ

ತಮ್ಮ । ಸರಸೇರ ಮನೆಯೊಳಗಿಟ್ಟು ॥ ನಿರಸಾದಾನೇರಿಂಥೋಗೋದು । ಸ್ಮರಿಸೆ ಭಾಮಿನಿ ಸುಗುಣೆ ಕಾಮಿನಿ ॥ ೧೫ ॥ ಸಾರಾವಚನ ಕೇಳಿ ಭಾಮೆ । ಮೋರೆ ಕೆಳಗೆ ಮಾಡುತಿರಲು ॥ ನಾರಿ ರುಗ್ಮಿಣಿ ಬಾರೆ ಎಂದು । ವೀರಕರೆದನು ಆಕೆಯಲ್ಲಿ ಸೇರಿದನು ॥ ೧೬ ॥ ಮಂಗಳಾಂಗ ಮಹಿಮ ಕೇಶವಾ । ಲಿಂಗಿಸಿದ ಭೈಷ್ಮಿಯನ್ನು ॥ ತುಂಗಸರ್ವ ಗೋಪೀರಮಣ । ರಂಗವಿಠಲನು ಪೂರ್ಣ ಶ್ರೀಪತಿ ॥ ೧೭ ॥ ಶ್ರೀಃ ॥

## ೩೯. ರಾಗ ಮೋಹನ, ಅಟತಾಳ.

ಕಳ್ಳನೆಂದು ದೂರುತಾರೆ । ಗೋಪ್ಯಮ್ಮ ಕೇಳೆ । ಗೊಲ್ಲತಿಯರೆಲ್ಲ ಕೂಡಿ ॥ ॥ ಪಲ್ಲ ॥ ಕೊಲ್ಲಬೇಕೆಂಬ ಬಗೆಯೊಳಿನ್ನ ಇಲ್ಲದ ಸುದ್ದಿ ಪುಟ್ಟಿಸಿ ॥ ಅನುಪಲ್ಲ ॥ ಹರವಿಹಾಲ ಕುಡಿವೋರೆ । ಎನ್ನ ಹೊಟ್ಟೆ । ಕೆರೆಯೇನೆ ನೋಡೆ ಅಮ್ಮಯ್ಯಾ । ಕರದು ಅಣ್ಣನ ಕೇಳು । ಉಂಟಾದರೆ । ಒರಳಿಗೆ ಕಟ್ಟೆ ಇನ್ನೊಮ್ಮೆ ॥ ೧ ॥ ಅಟ್ಟವನೇರಿ ಇಳಿಯೋದು । ಅದು ಎನಗೆ । ಕಷ್ಟವಲ್ಲವೆ ಅಮ್ಮಯ್ಯ ನೀ ॥ ಕೊಟ್ಟಹಾಲು ಕುಡಿಯಲಾರದೆ । ಅದ ನಾನು । ಬಟ್ಟಲಲ್ಲೆ ಬಿಟ್ಟು ಪೋದೆ ॥ ೨ ॥ ಮಾಸಲ ಬೆಣ್ಣೆ ಮೆಲುವೋದು । ಅದು ಎನಗೆ । ದೋಷವಲ್ಲವೇನೆ ಅಮ್ಮಯ್ಯ ॥ ಆಶೆಮಾಡಿಕೊಂಡ ದೇವರು । ಅದು ಎನ್ನ । ಮೋಸಮಾಡಿ ಕಣ್ಣು ಕಳೆಯದೆ ॥ ೩ ॥ ಪುಂಡುತನ ಮಾಡೋರೆ । ನಾನು ದೊಡ್ಡ । ಗಂಡಸೇನೆ ನೋಡೆ ಅಮ್ಮಯ್ಯ ॥ ಕಂಡವಾರು ದೂರುತಾರೆ । ಗೋಪ್ಯಮ್ಮ ನಿನ್ನ । ಕಂದನಲ್ಲವೇನಮ್ಮಯ್ಯ ॥ ೪ ॥ ಉಂಗುರದ ಕರದಿಂದ । ಗೋಪಿ ತನ್ನ । ಶೃಂಗರದ ಮಗನ ಎತ್ತಿ ॥ ರಂಗವಿಟ್ಠಲನ್ನ ಪಾಡಿ । ಉ । ತ್ತುಂಗ ಉಡುಪಿ ಕೃಷ್ಣನ ತೂಗಿದಳಾಗ ॥ ೫ ॥

## ೪೦. ರಾಗ ಆನಂದಭೈರವಿ, ಝುಂಪೆತಾಳ.

ಐಶ್ವರ್ಯಜನಕವಾಗೀ । ನಿರ್ಮಿಸಿದ । ಪಚ್ಚೆಯತೊಟ್ಟಿಲಲ್ಲೀ ॥ ಅಚ್ಯುತಾನಂತನಿರಲೂ । ತೂಗಿದರು । ಮಚ್ಛಾವತಾರ ಹರಿಯಾ ॥ ೧ ॥ ಧರ್ಮಸಂಸ್ಥಾಪನೆಂದೂ । ನಿರವಧಿಕ । ನಿರ್ಮಲಚರಿತ್ರನೆಂದೂ ॥ ಮರ್ಮ

ಕರ್ಮಗಳ ತಿಳಿದು । ತೂಗಿದರು । ಕೂರ್ಮಾವತಾರ ಹರಿಯಾ ॥ ೨ ॥ ಸರಸಿಜಾಕ್ಷಿಯರೆಲ್ಲರೂ । ಜನವಶೀ । ಕರದಿವ್ಯರೂಪದಿಂದಾ ॥ ಪರವು ಹರುಷದಲಿ ಪಾಡೀ । ತೂಗಿದರು । ವರಹಾವತಾರಹರಿಯಾ ॥ ೩ ॥ ಕರಿ ಕುಂಭಗಳ ಪೋಲುವ । ಕುಚದೊಳು । ಹಾರಪದಕವು ಹೊಳೆಯುತಾ ॥ ವರವರ್ಣಿನಿಯರು ಪಾಡಿ । ತೂಗಿದರು । ನರಸಿಂಹಾವತಾರ ಹರಿಯಾ ॥ ॥ ೪ ॥ ಭಾವಸಾಮಣಿಯರೆಲ್ಲರೂ । ಯದುವಂಶ । ಸೋಮನಿವನೆಂದು ಪೊಗಳೀ ॥ ನೇಮದಿಂದಲಿ ಪಾಡಿ । ತೂಗಿದರು । ವಾಮನಾವತಾರ ಹರಿಯಾ ॥ ೫ ॥ ಸಾಮಜವರದನೆಂದೂ । ಅತುಳಭೃಗು । ರಾಮನವ ತಾರನೆಂದೂ ॥ ಶ್ರೀಮುದಾನಂದ ಹರಿಯು । ತೂಗಿದರು । ಪ್ರೇಮಾತಿರೇಕ ದಿಂದಾ ॥ ೬ ॥ ಕಾಮನಿಗೆ ಕಾಮನೆಂದೂ । ಸುರಸಾರ್ವ । ಭೌಮಗುಣ ಧಾಮನೆಂದೂ ॥ ವಾಮನೇತ್ರೆಯರು ಪಾಡಿ । ತೂಗಿದರು । ರಾಮಾವ ತಾರ ಹರಿಯಾ ॥ ೭ ॥ ಸೃಷ್ಟಿಯ ಕರ್ತನೆಂದೂ । ಜಗದೊಳಗೆ । ಶಿಷ್ಟ ಸಂತುಷ್ಟನೆಂದೂ ॥ ದೃಷ್ಟಾಂತರಹಿತನೆಂದೂ । ತೂಗಿದರು । ಕೃಷ್ಣಾವ ತಾರ ಹರಿಯಾ ॥ ೮ ॥ ವೃದ್ಧನಾರಿಯರೆಲ್ಲರೂ । ಜಗದೊಳಗೆ ಪ್ರ । ಸಿದ್ಧ ನಿವನೆಂದು ಪೊಗಳೀ ॥ ಬದ್ಧಾನುರಾಗದಿಂದಾ । ತೂಗಿದರು । ಬುದ್ಧಾವ ತಾರ ಹರಿಯಾ ॥ ೯ ॥ ಥಳಥಳತ್ಕಾರದಿಂದಾ । ರಂಜಿಸುವ । ಮಲಯು ಜಾಲೇಪದಿಂದಾ ॥ ಜಲಜಗಂಧಿಯರು ಪಾಡೀ । ತೂಗಿದರು । ಕಲ್ಕ್ಯಾ ವತಾರ ಹರಿಯಾ ॥ ೧೦ ॥ ಕನಕಮಯಖಚಿತವಾದಾ । ತಲ್ಪದಲಿ । ವನಜಭವಜನಕನಿರಲೂ ॥ ವನಜನಾಭನ್ನ ಪಾಡಿ । ತೂಗಿದರು । ವನಿ ತಾಮಣಿಯರೆಲ್ಲರೂ ॥ ೧೧ ॥ ದೇವಾಧಿದೇವನೆಂದೂ । ಈ ಶಿಶುವು । ಭಾವನಾತೀತನೆಂದೂ ॥ ದೇವಗಂಧರ್ವರು ಪಾಡಿ । ತೂಗಿದರು । ದೇವ ಗಾಂಧಾರರಾಗದಿಂದಾ ॥ ೧೨ ॥ ಕಂಕಣಧ್ವನಿಗಳಿಂದ । ರಂಜಿಸುವ । ಕಿಂಕಿಣೀಸ್ವನಗಳಿಂದಾ ॥ ಪಂಕಜಾಕ್ಷಿಯರು ಪಾಡಿ । ತೂಗಿದರು । ಶಂ ಖಿನೀಭಾಮಿನಿಯರೂ ॥ ೧೩ ॥ ಮತ್ತಗಜಗಾಮಿನಿಯರು । ದಿವ್ಯತರ । ಚಿತ್ರವಸ್ತ್ರಗಳನುಟ್ಟೂ ॥ ಚಿತ್ತಸಂತೋಷದಿಂದ । ತೂಗಿದರು । ಚಿತ್ರಿಣೀ ಭಾಮಿನಿಯರೂ ॥ ೧೪ ॥ ಆನಂದಸದನದೊಳಗೇ । ಗೋಪಿಯರು । ಆ

ನಂದಸುತನ ಕಂಡೂ ॥ ಆನಂದಭರಿತರಾಗಿ । ತೂಗಿದರು । ಆನಂದಭೈರವಿಯಿಂದಾ ॥ ೧೫ ॥ ಹಸ್ತಭೂಷಣವೆುರೆಯಲೂ । ದಿವ್ಯತರ । ಹಸ್ತಲಾಘವಗಳಿಂದಾ ॥ ಹಸ್ತಗಳ ಪಿಡಿದುಕೊಂಡು । ತೂಗಿದರು । ಹಸ್ತಿನೀ ಭಾಮಿನಿಯರೂ ॥ ೧೬ ॥ ಚೊಕ್ಕಕಸ್ತೂರಿಪಂಕದಿಂ । ರಂಜಿಸುವ । ಮಕರಿಕಾಪತ್ರ ಬರದೂ ॥ ಲಿಕುಚಸ್ತನಿಯರು ಪಾಡಿ । ತೂಗಿದರು । ಅಕಳಂಕಚರಿತಹರಿಯಾ ॥ ೧೭ ॥ ಪಲ್ಲವಾಧರೆಯರೆಲ್ಲಾ । ಈ ಶಿಶುವು । ತುಲ್ಯವರ್ಜಿತನೆನುತಲೀ ॥ ಸಲ್ಲಲಿತಮಧುರಗಾನ । ತೂಗಿದರು । ಕಲ್ಯಾಣಿರಾಗದಿಂದಾ ॥ ೧೮ ॥ ಪದ್ಮರಾಗವ ಪೋಲುವ । ಹರಿಪಾದ । ಪದ್ಮದಲಿ ತಮ್ಮ ಹೃದಯಾ ॥ ಪದ್ಮದಲಿ ನಿಲಿಸಿ ಪಾಡೀ । ತೂಗಿದರು । ಪದ್ಮಿನೀಭಾಮಿನಿಯರೂ ॥ ೧೯ ॥ ನೀಲಘನನೀಲ ಜೋಜೋ । ಕರುಣಾಲವಾಲ ಶ್ರೀಕೃಷ್ಣ ಜೋಜೋ ॥ ಲೀಲಾವತಾರ ಜೋಜೋ । ಪರಮಾತ್ಮ । ಬಾಲಗೋಪಾಲ ಜೋಜೋ ॥ ೨೦ ॥ ಇಂದುಧರನ ಮಿತ್ರ ಜೋಜೋ । ಶ್ರೀಕೃಷ್ಣ । ಇಂದುರವಿನೇತ್ರ ಜೋಜೋ ॥ ಇಂದುಕುಲನೇತ್ರ ಜೋಜೋ । ತೂಗಿದರು । ಇಂದಿರಾರಮಣ ಜೋಜೋ ॥ ೨೧ ॥ ವಿಷಧರನ ತಲ್ಪ ಜೋಜೋ । ಶ್ರೀಕೃಷ್ಣ । ವಿಷವನುಂಡವನೆ ಜೋಜೋ ॥ ವಿಷಶಯನ ಕೃಷ್ಣ ಜೋಜೋ । ಪರಮಾತ್ಮ । ರಂಗವಿಟ್ಠಲನೆ ಜೋಜೋ ॥ ॥ ೨೨ ॥ ತುಂಗಭವಭಂಗ ಜೋಜೋ । ಪರಮಾತ್ಮ । ರಂಗ ಕೃಪಾಂಗ ಜೋಜೋ ॥ ಮಂಗಳಾಪಾಂಗ ಜೋಜೋ । ನವ ಮೋಹ । ನಾಂಗ ರಂಗವಿಟ್ಠಲನೆ ಜೋಜೋ ॥ ೨೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೪೧. ರಾಗ ಭೂಪಾಳಿ, ಅಟತಾಳ.

ಬಿಡಿಬಿಡಿ ಸಂದೇಹವನ್ನು ॥ ಬಿಡಿಬಿಡಿ ಸಂದೇಹ ಪೊಡವಿಯ ಮನುಜರೆಲ್ಲ । ಒಡೆಯನೊಬ್ಬನೆ ಜಗಕೆ ರಂಗವಿಟ್ಠಲಾ ॥ ಪಲ್ಲ ॥ ಸುರಮುನಿಗಳು ಕೂಡಿ ಪರದೈವ ಯಾರೆಂದು । ಪರಮುಹಟದಲಿ ವಿವಾದವನು ಮಾಡೆ ॥ ಸರಸಿಜಾತನ ಸುತನು ಭ ಗುವನಟ್ಟಲು ಪೋದ । ಅರಿತು ಬರುವೇ

ನೆಂದು ಪದ್ಮಜನ ಸಭೆಗೆ ॥ ೧ ॥ ಮುನಿವರನ ಕಂಡು ಪದ್ಮಜನೆದ್ದು ವಂದಿಸದೆ । ವನಜಭವ ಕೋಪವನು ಮಾಡಿ ಜರಿಯೆ । ಮುನಿಪರಮ ತತ್ವ ಇವನಲ್ಲೆಂದೆನುತ ಸಾರಿ ॥ ಮನಸಿಜನ ವೈರಿ ಲೋಕಕೆ ಪೋದನು ॥ ॥ ೨ ॥ ಹರನು ಭೃಗುಮುನಿ ಬರಲು ತನ್ನನುಜನೆಂತೆಂದು । ಸರಭಸದಲ್ಲಿದ್ದು ತಕ್ಕೈಸಪೋಗೆ ॥ ಜರಿದು ಹರನ ಪೂಜೆ ಜಗದಿ ಬೇಡೆನಲು ಶಂ। ಕರನು ಶೂಲವ ಪಿಡಿದು ಎಸೆಯ ಬಗೆದಾ ॥ ೩ ॥ ಹರನ ಕೋಪವ ಕಂಡು ಗಿರಿಜೆ ಚರಣವ ಪಿಡಿದು । ಕರುಣಿ ಕಾಯಲುಬೇಕು ಮುನಿಯ ಎನಲು ॥ ಮರಣಭಯದಿಂದ ನಿರ್ಮುಕ್ತನಾಗುತಲೆ ಮುನಿ । ಹೊರಟೋದ ವೈಕುಂಠ ಲೋಕಕೆ ॥ ೪ ॥ ಅಲ್ಲಿ ಮಹಲಕ್ಷ್ಮಿ ತೊಡೆಯಲಿ ಪವಡಿಸಿ ಇರಲು । ಫುಲ್ಲನಾಭನೆ ಚರಣದಿಂದಲೊದೆಯೇ । ಮೆಲ್ಲನೆ ಪಿಡಿದು ಪಾದವ ಮುನಿಗೆ ಪೊಡಮಟ್ಟು । ಇಲ್ಲಿ ವಿಜಯಂಗೈಯ್ಯಲೇಕೆಂದನು ॥ ೫ ॥ ಪರಮ ಮುನಿಪಾದ ಸೋಂಕಲು ಪಾವನಾದೆನು । ಚರಣರಜ ಪರಮಪಾವನ ಸುಲಭವೆ ॥ ಸಿರಿಗೆ ನೆಲೆಮನೆಯಾಯ್ತು । ವರ ಪ್ರಹರದಿಂದೆನಲು । ಹರುಷದಲಿ ಉಬ್ಬಿ ಮುನಿ ತನುಮರೆದನೂ ॥ ॥ ೬ ॥ ಕರಿಯು ಸರಸಿನೊಳು ಮಕರಿಯು ಪಿಡಿದೆಳೆಯುತಿರೆ । ಪರಮಪುರುಷನೆ ಪೊರೆಯೊ ಎಂದು ಕೂಗೆ । ಗರುಡವಾಹನನಾಗಿ ಹರಿ ಬಂದು ಕಾಯ್ದುದಕೆ । ಪರದೈವವ್ಯಾರು ಇವನುಳಿದು ಜಗದಿ ॥ ೭ ॥ ರಾಜಸೂಯವ ಧರ್ಮಸುತನು ಮಾಡಿದ ವೇಳೆ । ಪೂಜೆಗರ್ಹರು ಸುರರೊಳ್ಯಾರೆನ್ನಲು ॥ ಭಾಜನನು ಸದ್ಗುಣನು ಕೃಷ್ಣನೊಬ್ಬನೆ ಯೆಂದು । ರಾಜೀತ ಸುರವ್ರತನು ನುಡಿದಾ ನಿಜವ ॥ ೮ ॥ ಗಂಗಾಜನಕಪಾದ ದಿವ್ಯಮಂಗಳ ಚರಿತ । ಶೃಂಗಾರ ನಿಧಿ ಭಕತಾಧೀನ ದೇವಾ ॥ ಮಂಗಳಾತ್ಮಕನಾದ ರಂಗವಿಠ್ಠಲನ । ಹಿಂಗದೆ ಜನರುಗಳು ನೆರೆನಂಬಿರೋ॥ ೯ ॥

೪೨. ರಾಗ ಯದುಕುಲಕಾಂಬೋದಿ, ಆದಿತಾಳ.

ರಂಗ ಮನೆಗೆ ಬಾರೊ ಕೃಪಾಂಗ ಶ್ರೀ ॥ ಪಲ್ಲ ॥ ರಂಗಕಲುಷ ವಿಭಂಗ। ಗರುಡ ತುರಂಗ ನವ ಮೋಹನಾಂಗ । ಶ್ರೀರಂಗ ॥ ಅನುಪಲ್ಲ ॥ ಪಚ್ಚೆ

ಬಾವುಲಿಗಳು ನಿನ್ನ ಕಿವಿಯೊಳಗಿಟ್ಟು । ಮುಚ್ಚಿ ಮುದ್ದಾಡಿ ನೋಡುವೆ ॥ ಹೆಚ್ಚಿದ । ವಾಲಿಯನು ಬಾಣದಿ ಬೆಚ್ಚಿದ ಸಪ್ತತಾಳಂಗಳನು । ಬಿಚ್ಚಿದ ಸಮುದ್ರವನ್ನು ಮುಚ್ಚಿದ ॥ ಎಚ್ಚರಿಕೆಯಲಿ ಲಂಕೆಯನು ಪೊಕ್ಕು ಕಿಚ್ಚುಗಳ ಹಚ್ಚಿಸಿದ । ಹನುಮನ ಮೆಚ್ಚಿಸಿದ । ಖರದೂಷಣರ ಶಿರಗಳ ಕೊಚ್ಚಿದ । ಅಚ್ಯುತಾನಂತ ॥ ೧ ॥ ಮುತ್ತಿನ ಹಾರಗಳು ನಿನ್ನ ಕುತ್ತಿಗ್ಗೆ ಹಾಕಿ । ಎತ್ತಿ ಮುದ್ದಾಡಿ ನೋಡುವೆ ॥ ಹತ್ತಿದ । ರಥವನು ಮುಂದೊತ್ತಿದಾ । ಉಭಯರಿಗೆ ಜಗಳವನು ಬಿತ್ತಿದ । ಮತ್ತಮಾತಂಗಗಳನೆಲ್ಲ । ಕತ್ತರಿಸಿ ಮುಂದೊತ್ತಿ ನಡೆಯುತ ಈ ತೆರದಿ ನಿಂದ । ವರ ರಥಿಕರ ಕತ್ತರಿಸಿ ಕಾಳಗವ ಮಾಡಿದ ॥ ೨ ॥ ಉಂಗುರಗಳ ನಿನ್ನ ಅಂಗುಲಿಗಳಿಗಿಟ್ಟು । ಕಂಗಾಳಿಂದ ನೋಡುವೆ । ಹೆಂಗಳ । ಗೋಪಹೆಂಗಳ । ಉತ್ತುಂಗ ಕುಚಂಗಳ । ಆಲಿಂಗಿಸಿ ಭುಜಂಗಳ । ಕಮಲ ಸಮಪಾದಂಗಳ । ಸ್ಮರಿಸಿದ ಮಾತಂಗರಾಯನ । ಭಂಗವ ಪರಿಹರಿಸಿ ಬೇಗದಿ । ಹಿಂಗದೆ ಸ್ವರ್ಗವನಿತ್ತ್ಯೋತುಂಗವಿಕ್ರಮ ರಂಗವಿಟ್ಠಲನೆ ॥ ೩ ॥ ಶ್ರೀಃ ॥

## ೪೩. ರಾಗ ಶಂಕರಾಭರಣ, ಆದಿತಾಳ.

ಕೇಳಿದ್ಯಾ ಕೌತುಕವನ್ನು । ಕೇಳಿದ್ಯಾ ॥ ಪಲ್ಲ ॥ ಕೇಳಿದ್ಯಾ ಕೌತುಕವನ್ನು । ನಾ ಕೇಳಿದೆ ನಿನಗಿಂತ ಮುನ್ನ ॥ ಅಹ । ಚಾಳಿಕಾರ ಕೃಷ್ಣ ಪೇಳದೆ ಮಧುರೆಗೆ । ಕೋಳಿ ಕೂಗದ ಮುನ್ನ । ನಾಳೆ ಪಯಣವಂತೆ ॥ ಅನುಪಲ್ಲ ॥ ಕರೆಯ ಬಂದಿಹನಂತೆ ಕ್ರೂರ । ತಮ್ಮ । ಕಿರಿಯಯ್ಯನಂತೆ ಅಕ್ರೂರ । ವರ । ಹೊರವಳಲಲಿ ಬಿಟ್ಟು ತೇರ । ಅಹ । ಹಿರಿಯನೆಂದು ಕಾಲಿಗೆರಗಲು ರಾಮಕೃ । ಷ್ಣರ ಕಕ್ಕಿಸಿಕೊಂಡು । ಮರುಳು ಮಾಡಿದ ಬುದ್ಧಿ ॥ ೧ ॥ ಸೋದರಮಾವನ ಮನೆಯ । ಬೆಳ । ಗಾದರೆ ಅಲ್ಲಿ ಉದಯ । ಪರ । ಮಾದರವಂತೆ ತ್ವರಿಯ । ಅಲ್ಲಿ । ತೋರಿದ ಮನಕೆ ನಾರಿಯ । ಅಹ । ಸಾಧಿಮಲ್ಲ ಮೊದಲಾದ ಬಿಲ್ಲುಹಬ್ಬ । ಸಾಧಿಸಿಕೊಂಡು ಬರುವೆವೆಂಬ ಸುದ್ದಿ ॥ ೨ ॥ ಹುಟ್ಟಿದ್ದ ಸ್ಥಳವಂತೆ ಮಧುರಿ । ಕಂಸ । ನಟ್ಟುಳಿಗಾರದೆ ಬೆದರಿ । ತಂದಿಟ್ಟ ತನ್ನ ತಂಗೆಚದುರಿ । ತೋರಿ । ಕೊಟ್ಟಳು ಭಯವನ್ನು ಬೆದರಿ ॥

ಅಹ । ಎಷ್ಟು ಹೇಳಲಿ ರಂಗವಿಟ್ಠಲನು ಮಾವನ । ಬೆಟ್ಟಿಗಾಗಿ ಒಡಂಬಟ್ಟು ಪೋಗುವ ಸುದ್ದಿ ॥ ೩ ॥ ಶ್ರೀಃ ॥

## ೪೪. ರಾಗ ಶಂಕರಾಭರಣ, ಅಟತಾಳ.

ಜೋ ಜೋ ಜೋಜೋ ಜೋಜೋ ಜೋ ಕೃಷ್ಣ ಪರಮ । ನಂದ ಗೋಪಿಯ ಕಂದ ಮುಕುಂದ ॥ ಪಲ್ಲ ॥ ಭೂಮಿಯ ಚಿನ್ನದತೊಟ್ಟಿಲ ಮಾಡಿ । ಸೋಮಸೂರ್ಯರೆಂಬ ಕಲಶವ ಮಾಡಿ ॥ ಆ ಮಹಾ ಆಕಾಶ ಕೇದಂಟವಮಾಡಿ । ಜೋಜೋ ಜೋಜೋ ಜೋ ಯೆಂದು ಪಾಡಿ ॥ ೧ ॥ ವಸುದೇವ ಸುತನಾದ ಮುದ್ದು ಮುರಾರಿ । ಅಸುರೆ ಪೂತನಿಯ ಪ್ರಾಣಾಪಹಾರಿ ॥ ಅಸಮಸಾಹಸ ಮಲ್ಲದೈತ್ಯರ ವೈರಿ । ಶಿಶುವಾಗಿ ದೇವಕಿಗಾನಂದ ತೋರಿ ॥ ॥ ೨ ॥ ಬೌದ್ಧನಾಗಿ ದೈತ್ಯರನಳಿದ್ಯಲ್ಲ । ಮುದ್ದು ತುರಂಗವನೇರಿ ಕಲ್ಕ್ಯನಾದ್ಯಲ್ಲ ॥ ಪದ್ಮನಾಭ ಶಿರಿ ಭಕ್ತವತ್ಸಲ್ಲ । ನಿದ್ರೆಯ ಮಾಡಯ್ಯ ಶ್ರೀರಂಗವಿಠಲಾ ॥ ೩ ॥ ಶ್ರೀಃ ॥

## ೪೫. ರಾಗ ಕಾಂಬೋಧಿ, ಅಟತಾಳ.

ಮರೆತಿಯೋನೋ ರಂಗ । ಮಂಗಳಾಂಗ ॥ ತುರುಕರ ಕಾಯ್ವಲ್ಲಿ ತೊಂಡನಾಗಿದ್ದೆನ್ನ ॥ ಪಲ್ಲ ॥ ಕೋಲು ಕೈಯಲಿ ಕೊಳಲು । ಜೋಲುಗಂಬಳಿ ಹೆಗಲ । ಮೇಲೆ ಕಲ್ಲಿಚೀಲ ಕಂಕಳಲ್ಲಿ ॥ ಕಾಲಗಡಗವನಿಟ್ಟು ಕಾಡೊಳಿಹ ಪಶುಹಿಂಡಾ । ಲಾಲಿಸುವ ಬಾಲಕರ ಮೇಳದೊಳಗಿದ್ದೆನ್ನ ॥ ೧ ॥ ಕಲ್ಲುಮಣಿ ಕವಡಿಯನು ಕಾಡೊಳಿಹ ಗುಲುಗುಂಜಿ । ಸಲ್ಲದೊಡವೆಯ ನೀನು ಸರ್ವಾಂಗಕೆ ॥ ಅಲ್ಲೆಲ್ಲೆಸೆವ ಧರಿಸಿ ನವಿಲ । ಗರಿಗಳ ಗೊಂಡೆ । ಅಲ್ಲಿ ಗೊಲ್ಲರ ಕೂಡಾ ಚಲ್ಲಾಟಾ ಮಾಡುತಲಿ ॥ ೨ ॥ ಸಿರಿದೇವಿ ಬಂದು ಸೇರಿದ ಬಳಿಕ ಲೋಕದಲಿ । ಸಿರಿ ಅರಸನೆಂದು ಸೇವಕರರಿವರೊ ॥ ಶರಣಾಗತರ ಪೊರೆವ ಶ್ರೀರಂಗವಿಠಲಯ್ಯ । ನರಸಿಂಗ ನೀನಿರುವ ಪರಿಯು . ಮುಂದಿನ ಸಿರಿಯು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಕೇದಾರಗೌಳ, ಝಂಪೆತಾಳ.

ಮದನನಯ್ಯನ ಮನ ಮಧುಪನೆಂಬುವರೆ । ಮಧುರಿಪು ಮಾರ ಮಣ ವಿಠಲರೇಯ ॥ ಪಲ್ಲ ॥ ಅರಿಯದ ಬಾಲೇರಿಗೆ ತನ್ನ ಪರಿಯ ನಿರೂಪಿಸಿ ಮುನ್ನ । ನೆರೆದು ರತಿಪತಿಯಾ ಸುಖ ನೆರೆದೋರಿದಾ ॥ ತೊರೆದು ಬದುಕುವದೆಂತು ರತಿಪತಿಯ ಪಿತನಗಲಿ । ವಿರಹ ದುರಿತಾನಲವಡರಿ ಸುಡುತಲಿಹುದೆ ॥ ೧ ॥ ನಡೆನುಡಿ ನಗೆಯುಮಾಡಿ ಬಾಲೆಯರನುಬ್ಬಿಸಿ । ಬಿಡದೆ ಎಮ್ಮನು ತನ್ನ ವಶಮಾಡಿದಾ ॥ ಕಡೆಯಿಲ್ಲದನುಭವದಾ ಸುಖದ ಸವಿಯನೆ ತೋರಿ । ಮಡದಿ ತಡೆದಳೊ ಮಧುರಿಯಲಿ ನಲ್ಲನಾ ॥ ॥ ೨ ॥ ಎಂದೆಂದು ನಿಮ್ಮವಶವಲ್ಲಿಹೆನೆಂದು ಅಭಯುವನಿತ್ತು । ಇಂದುಮುಖಿ ನಾರಿಯರ ನೆರೆನಂಬಿಸಿ ॥ ನಂದನಂದನ ನಮ್ಮ ಕಾನನದೊಳೀಡಾಡಿ । ಇಂದು ಮಧುರಿಯ ನಾರಿಯರ ನೇತ್ರದಾ ॥ ೩ ॥ ಇವನ ವಚನದ ಕಪಟ ತಿಳಿಯಲರಿಯದೆ ನಾವು । ನವ ಹರಿಣಿಯಂತೆ ಮರುಳಾಗಿ ಕೇಳೀ ॥ ವಿವರವರಿಯದೆ ನಾವು ಕಡುನೊಂದೆವೆಲೊ ಮಧುಪ । ಇವನ ಗುಣವರಿಯದಲೆ ಕಡುಕರುಣಿಯೆಂಬುವರು ॥ ೪ ॥ ಪತಿಸುತರ ಭವಬಂಧನಗಳೆಲ್ಲವೀಡಾಡಿ । ಗತಿ ನಮಗೆ ನೀನೆಂದು ಮರೆಹೊಕ್ಕೆವೋ ॥ ಕೃತಕನರಿಯದೆ ನಮ್ಮ ವನದಿ ನಿಲ್ಲಿಸಿ ಪೋದ । ಪತಿಯೊಡನೆ ಸಂಧಾನವೆಂತೊ ಎಲೊ ಮಧುಪಾ ॥ ೫ ॥ ಮರುಳುಗಳು ನಾವು ಶ್ರೀಹರಿಯು ಕೂಟಭಾಷಿ । ಇರುಳು ಹಗಲು ಜರೆಜರೆದಳಲುವ ॥ ಸಿರಿಯುವನ ಉಂಗುಟದ ಉಗುರುಗುಣ ಕಾಣಳೆಲೊ । ಹರಿನಮ್ಮ ನೆನೆವುದಚ್ಚರಿಯಲ್ಲವೆ ॥ ೬ ॥ ತುಂಗಗುಣನಿಲಯುವನ ಅಂಗಜನ ಪಿತನೆಂದು । ರಂಗನಿಗೆ ಮನಸೋತು ಮರುಳಾದೆವೋ ॥ ಹೀಂಗೆ ಬದುಕುವದೆಂತು ಭೃಂಗ ಮಧುರೆಗೆ ಪೋಗಿ । ರಂಗವಿಟ್ಠಲನ ತಂದೆಮ್ಮನುಳುಹುವದೋ ॥ ೭ ॥ ಶ್ರೀಃ ॥

## ೪೭. ರಾಗ ಮಧ್ಯಮಾವತಿ, ಆದಿತಾಳ.

ನಲಿದಾಡೆ ಎನ್ನ ನಾಲಿಗೆ ಮೇಲೆ । ಶಾರದಾದೇವಿ ಕುಣಿದಾಡೆ ಎನ್ನ ನಾಲಿಗೆ ಮೇಲೆ ॥ ಪಲ್ಲ ॥ ಘಿಲು ಘಿಲು ಘಿಲು ಗೆಜ್ಜೆಯ ನಾದ । ಚಲುವ

ಅಂದುಗೆ ರುಳಿಪೆಂಡ್ಯಾನಿಟ್ಟ ಪುಟ್ಟಪಾದ । ಸುಖದನುತ ಪಾದಾ ॥ ಸರಸಿಜೋದ್ಭವನ ವದನನಿಲಯಳೆ ಕರುಣದಿಂದ । ಪರಿಪಾಲಿಸು ತಾಯಿ ॥ ॥ ೧ ॥ ನಸುನಗೆ ಮುಖವು ನಾಸಾಭರಣ । ಯೆಸವ ಕಪೋಲ । ಹೊಸ ಮುತ್ತಿನ ಚಳತುಂಬಿಟ್ಟ ಶ್ರವಣ । ತಿಲಕದಹಸನಾ ॥ ಶಶಿಸೂರ್ಯರ ಆಭರಣ ಶೋಭಿತಳೆ । ಕುಸುಮ ಮುಡಿದ ಮೂರ್ಧಜವುಳ್ಳವಳೆ ॥ ೨ ॥ ಶೃಂಗಾರವಾದ ಜಡೆ ಭಂಗಾರ ರಾಕಟೆಚೌರಿ । ಪೊಂಗ್ಯಾದಿಗೆ ಗೊಂಡೆ ಮುತ್ತಿನ ಹಾರಾ । ರಂಗುಮನೋಹರ ॥ ಮಂದಗಮನೆ ಅರವಿಂದನಯನೆ ಶ್ರೀ । ರಂಗವಿಠಲನ ತೋರಿ ಶುಭಾಂಗೆ ॥ ೩ ॥

## ೪೮. ರಾಗ ಶಂಕರಾಭರಣ, ಅಟತಾಳ.

ಎಲ್ಯಾಡಿ ಬಂದ್ಯೊ ಮುದ್ದು ರಂಗಯ್ಯ । ನೀನೆಲ್ಯಾಡಿ ಬಂದ್ಯೊ ಕೃಷ್ಣಯ್ಯ ॥ ಪಲ್ಲ ॥ ಎಲ್ಯಾಡಿ ಬಂದ್ಯೊ ಎನ್ನ ಕಣ್ಣಮುಂದಾಡದೆ ॥ ॥ ಅನುಪಲ್ಲ ॥ ಆಲಯದೊಳಗೆ ನೀನಾಡದೆ । ಬೆಣ್ಣೆ । ಪಾಲು ಸಕ್ಕರೆಯು ನೀ ಮೆಲ್ಲದೆ । ಚಿಕ್ಕ । ಬಾಲರೊಡಗೂಡಿ ಆಡದೆ । ಬಾಲಯ್ಯ ನೀನೆನ್ನ ಕಣ್ಣ ಮುಂದಾಡದೆ ॥ ೧ ॥ ಪದಕ ರತ್ನವ ನೀನೊಲ್ಲದೆ । ದಿವ್ಯ । ಮಧುರ ಭಾಷಣವ ನೀನಾಡದೆ ॥ ಸುದತಿಯರೊಡಗೂಡ್ಯಾಡದೆ । ಮುದ್ದು । ಚದುರಕೃಷ್ಣಯ್ಯ ಯೆನ್ನ ಕಣ್ಣಮುಂದಾಡದೆ ॥ ೨ ॥ ಅಷ್ಟದಿಕ್ಕಿನಲ್ಲಿ ಅರಸಿಕಾಣದೆ । ಬಲು । ದೃಷ್ಟಿಗೆಟ್ಟಿತೊ ನಿನ್ನ ನೋಡದೆ ॥ ನಾನೆಷ್ಟು ಹೇಳಲು ಕೇಳಬಾರದೆ । ರಂಗ । ವಿಟ್ಠಲ ನೀನೆನ್ನ ಕಣ್ಣಮುಂದಾಡದೆ ॥ ೩ ॥ ಶ್ರೀಃ ॥

## ೪೯. ರಾಗ ಕಲ್ಯಾಣಿ, ಅಟತಾಳ.

ಸದ್ದು ಮಾಡಲು ಬ್ಯಾಡವೊ । ನಿನ್ನ ಕಾಲಿಗೆ । ಬಿದ್ದು ನಾ ಬೇಡಿಕೊಂಬೆ ॥ ॥ ಪಲ್ಲ ॥ ನಿದ್ದೆ ಗೈವರೆಲ್ಲ ನೀ ಬಂದುದ ಕಂಡು । ಪದ್ದಿಯೆಂಬರು ಕಾಣೋ ॥ ಅನುಪಲ್ಲ ॥ ಬಳೆ ಘಿಲುಕೆನುತಲಿದೆ । ಎನ್ನ ಕೈಯ । ಸುಮ್ಮನೆ ಪಿಡಿವರೇನೋ ॥ ಮೊಲೆಗಳ ಪಿಡಿದು ನೀನೆಳೆಯುವಾಗ

ಕೊರ । ಳೊಳಗಿನ ಹಾರ ತೋರುತಲಿದೆ ॥ ೧ ॥ ನೆರಿಕೈಯ ತುಡುಕ ದಿರೊ । ಕಾಂಚಿದಾಮ । ಉಡಿಘಂಟೆ ಧ್ವನಿಸಿದೊಯರ್ಾನ್ವೋ ॥ ತೊರದ ಚೆಂದುಟಿಗಳು ಸವಿದು ಚಪ್ಪರಿಸದೆ । ತರವಲ್ಲ ಗಂಡ ಎಚ್ಚತ್ತು ತಾಮನ ವೊಲ್ಲ ॥ ೨ ॥ ನಾಡು ಮಾತುಗಳ್ಯಾತಕೋ । ಸಂಗೀತ । ಪಾಡುವ ಸಮ ಯವೇನೋ ॥ ಗಾಡಿಗಾರ ಶ್ರೀರಂಗವಿಠಲನ್ನ । ಪಾಡಿಪಂಥಗಳೊಡ ಗೂಡುವ ಸಮಯದಿ ॥ ೩ ॥ ಶ್ರೀಃ ॥

೫೦. ರಾಗ ಕಾಂಬೋಧಿ, ಏಕತಾಳ.

ಏನಾಯಿತು ಈ ರಂಗಗೆ ನೋಡಿರಮ್ಮ ॥ ಪಲ್ಲ ॥ ನಿ । ಧಾನಿಸಿ ನಮ ಗಿನ್ನು ಹೇಳಿರಮ್ಮ ॥ ಅನುಪಲ್ಲ ॥ ಪುಟ್ಟಿದಾರಭ್ಯ ಕಣ್ಣಮುಚ್ಚನಮ್ಮ । ಒಂ । ದಿಷ್ಟೇನಾದರು ಮೊಲೆಯನುಣ್ಣನಮ್ಮ ॥ ಚಟ್ಟಿಕ್ಕಿ ಮೊಗವ ತಾನು ಯೆತ್ತನಮ್ಮ । ಇನ್ನು ನಾ । ನೆಷ್ಟು ಹೇಳಲಿ ಬಾಯ ಮುಚ್ಚ ನಮ್ಮ ॥ ೧ ॥ ಕಾಯ ಕಿರಿದಾಗಿ ಮೈ ಹೆಚ್ಚಿತಮ್ಮ । ಹೆತ್ತ । ತಾಯ ಕರು ಣವಿಲ್ಲದಾಯಿತಮ್ಮ ॥ ನೋಯ ನೋಟದಿಂದ ಆಚ್ಛಿಯಾರಿತಮ್ಮ । ಅವನ । ಬಾಯೊಳಗೆ ವಿಶ್ವರೂಪು ತೋರಿತಮ್ಮ ॥ ೨ ॥ ಹೆಚ್ಚುಮಾತುಗಳ ತಾನಾಡನಮ್ಮ । ರಂಗ । ಸತ್ಯವಾಗಿ ಕುದುರೆ ತಾನೇರಿದನಮ್ಮ ॥ ನಿತ್ಯ ನಿರ್ದೋಷಿ ಗೋಪಿನಾಥನಮ್ಮ । ತನ್ನ । ಭಕ್ತರ ಸಲಹುವ ರಂಗವಿಟ್ಠಲ ನಮ್ಮ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಶ್ರೀಪಾದರಾಯರ ಕೀರ್ತನೆಗಳು ಸಂಪೂರ್ಣ.

॥ ಶ್ರೀಕೃಷ್ಣಾರ್ಪಣಮಸ್ತು ॥

ಶ್ರೀಃ

॥ ಶ್ರೀಗೋಪಾಲಕೃಷ್ಣಾಯ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಶ್ರೀವ್ಯಾಸರಾಯರ ಕೀರ್ತನೆಗಳು.

## ೧. ರಾಗ ಕಲ್ಯಾಣಿ, ಅಟತಾಳ.

ಸಿಕ್ಕಿದನೆಲೆಜಾಣೆ । ಶ್ರೀವೇಣುಗೋಪಾಲ ಭಕ್ತವತ್ಸಲ ದೇವನೂ ॥ ॥ ಪಲ್ಲ ॥ ಮಕ್ಕಳ ಚೆಂಡಿಕೆ ಮರದ ಕೊನೆಗೆ ಕಟ್ಟಿ । ಘಕ್ಕನೆ ಕೈ ಚಪ್ಪಾಳಿಕ್ಕಿ ಕೂಗುವ ರಂಗ ॥ ಅನುಪಲ್ಲ ॥ ಹೆಣ್ಣುಮಕ್ಕಳು ಬಚ್ಚಲೊಳಗೆ ಯೆಣ್ಣೆ ಹಚ್ಚೇವೆಂದು । ಬಣ್ಣವಸ್ತ್ರವ ಬಿಟ್ಟು ಬರಿಯ ಮೈಯೊಳಗಿರೆ ॥ ಬೆನ್ನಿಗೆ ಬಿಸಿನೀರು ಚೆಲ್ಲಿ ಸೀರೆಯ ಒಯ್ದು । ಉನ್ನತ ವೃಕ್ಷವನೇರಿದ ಜಾಣಾ ॥ ೧ ॥ ಪಟ್ಟೆಮಂಚದ ಮೇಲೆ । ಪತಿಯಂತೆ ಮಲಗಿರೆ । ಎಷ್ಟು ಸ್ವತಂತ್ರವೆಂದು ಪೇಳಿದರೆನ್ನ ॥ ಉಟ್ಟ ಶೀರೆಯ ಬಿಟ್ಟು ಬಟ್ಟಕುಚಕೆ ಕೈಯ । ಯಿಷ್ಟು ಮಾಡಿದ ಬಗೆ ಯೆಷ್ಟೆಂಬೆನೆಲೆ ಗೋಪಿ ॥ ॥ ೨ ॥ ಪಡಗರದಲಿ ಸೋಳಸಾಸಿರ ಗೋಪೇರಾ । ಒಡಗೂಡಿ ಕೊಳಲನೂದುತ ಮೊಸರನ್ನೆ ॥ ಕಡವ ಗೊಲ್ಲತಿಯರ ಕೈಪಿಡಿದಾಡುವ । ಒಡೆಯನೆ ಇವ ನಮ್ಮ ಉಡುಪಿಯ ಶಿರಿಕೃಷ್ಣ ॥ ೩ ॥ ಶ್ರೀಃ ॥

## ೨. ರಾಗ ಮೋಹನ, ಆದಿತಾಳ.

ಕೊಳಲನೂದುವ ಚದುರನಾರೆ । ನೋಡಮ್ಮಾ ॥ ಪಲ್ಲ ॥ ತಳಿರಂತೆ ತಾಂ ಪೊಳೆವ ಮಧುಕರ ಪಿಡಿದು ॥ ಅನುಪಲ್ಲ ॥ ನಾದದಿಂದ ತುಂಬಿತು

ಗೋವರ್ಧನ ಪರ್ವತವು । ಯಾವವಕುಲ ಘನವ ಸರಿಸಿದವು ಖಗಕು ಲವು ॥ ಶೋಧಿಸಿ ನೋಡಲು ಕೃಷ್ಣನ ಈಗಲೆ । ಸಾಧ್ಯವೇನೆ ವೃಂದಾ ವನದೊಳಗೆ ॥ ೧ ॥ ಮೇವ ಮೇಯುತ ಮರೆತವು ಗೋವುಗಳೆಲ್ಲ । ಸಾವ ಧಾನದಿಂಧರಿದಳು ಯಮುನಾದೇವಿ ॥ ಆವು ಕಾಯುತ ಗೋವ್ಗಳ ಮರೆ ತರು ಯಾ । ದವರಲ್ಲವೆ ವೃಂದಾವನದೊಳು ॥ ೨ ॥ ಸುರರು ಕೇಳಿ ಸುಮಸುರಿದರಾಕಾಶದಲಿ । ಹರಿದು ಹೋಗಿ ನೋಡೆಲೆ ವೃಂದಾವನ ದಲ್ಲಿ ॥ ಸಾರಿಸಾರಿಗೆ ಕೃಷ್ಣನು ಈಗಲೆ । ತುರುಗಳ ಕಾಯುವ ಕದಂಬ ವನದೊಳು ॥ ೩ ॥ ಶ್ರೀಃ ॥

### ೩. ರಾಗ ಮುಖಾರಿ, ಆದಿತಾಳ.

ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು ॥ ಪಲ್ಲ ॥ ಭೂತ ದಯಾಪರನಾಗಿರಬೇಕು । ಪಾತಕವೆಲ್ಲವ ಕಳೆಯಬೇಕು ॥ ಮಾತು ಮಾತಿಗೆ ಹರಿಯೆನಬೇಕು ॥ ೧ ॥ ಶಾಂತಿಶಮ ದಮ ಹಿಡಿಯಲು ಬೇಕು । ಭ್ರಾಂತಿ ಅವಗುಣ ಕಳೆಯಲು ಬೇಕು । ಸಂತತ ಸನ್ಮಾರ್ಗ ದಲ್ಲಿ ಇರಲು ಬೇಕು ॥ ೨ ॥ ಕಾಮ ಕ್ರೋಧವ ತಾ ಬಿಡಬೇಕು । ಮಮತೆ ಅಹಂಕಾರವ ನೀಗಲು ಬೇಕು । ಸೌಮ್ಯರ ಸಂಗದೊಳಿರಬೇಕು ॥ ೩ ॥ ವೇದಶಾಸ್ತ್ರವನೋದಲು ಬೇಕು । ಬೋಧತತ್ವವ ತಿಳಿಯಲು ಬೇಕು । ಮಾಧವನ ಸ್ಮರಣೆಯ ಮಾಡಲು ಬೇಕು ॥ ೪ ॥ ತಂದೆ ಕೃಷ್ಣನ ದಯ ಪಡೆಯ ಬೇಕು । ಬಂದದುಂಡು ಸುಖಪಡಬೇಕು । ಚಂದಾಗಿ ಜಗ ದೊಳಿರ ಬೇಕು ॥ ೫ ॥ ಶ್ರೀಃ ॥

### ೪. ರಾಗ ಭೈರವಿ, ಅಟತಾಳ.

ತ್ರಡವ್ಯಾಕೆ ಶ್ರೀರಾಮನಾಮ ನುಡಿನುಡಿ ॥ ಪಲ್ಲ ॥ ಅನ್ಯ ದೇವತೆಗಳ ಇನ್ನು ಭಜಿಸದಿರು । ಚನ್ನಾಗಿ ಹರಿಪದ ಪಿಡಿಪಿಡಿ ॥ ೧ ॥ ಮತ್ಸರ ಮುರಿದು ಸುನಿಶ್ಚಲ ಭಕುತಿಯಲಿ । ಅಚ್ಯುತ ಪದ ಪಿಡಿಪಿಡಿ ॥ ೨ ॥ ಕಷ್ಟವ ಕಳೆದು ಮನೋಭೀಷ್ಟವ ಸಲಿಪನು । ಶ್ರೀಕೃಷ್ಣನ ಪಾದವ ಪಿಡಿಪಿಡಿ ॥ ೩ ॥ ಶ್ರೀಃ ॥

## ೫. ರಾಗ ನಾಟಿ, ಅಟತಾಳ.

ಶರಣು ಶರಣು ॥ ಪಲ್ಲ ॥ ಶರಣು ಮತ್ಸ್ಯಕೂರ್ಮವರಾಹ । ನರಹರಿ ವಾಮನ ಭಾರ್ಗವಾ । ಶರಣು ರಾಘವ ಕೃಷ್ಣ ಬೌದ್ಧ । ಶರಣು ಕಲ್ಕಿ ರೂಪಗೆ ॥ ೧ ॥ ಬಿಡೆ ನಾ ನಿನ್ನ ಕೇಶವ । ನಾರಾಯಣ ಮಾಧವಾ । ಅಂಬುಜಾಕ್ಷ ಗೋವಿಂದ ವಿಷ್ಣು । ಸಂಭ್ರಮದಿ ಮಧುಸೂದನ ॥ ೨ ॥ ಕರುಣದಲಿ ರಕ್ಷಿಸು ತ್ರಿವಿಕ್ರಮ । ಕಲಿತವಾಮನ ಶ್ರೀಧರ । ಪರಮ ಪಾವನ ಹೃಷೀಕೇಶ । ಪದ್ಮನಾಭ ದಾಮೋದರಾ ॥ ೩ ॥ ವಾಸವಾರ್ಚಿತ ಸಂಕರ್ಷಣ । ವಾಸುದೇವ ಪ್ರದ್ಯುಮ್ನನೆ ॥ ಶ್ರೀಶ ಅನಿರುದ್ಧ ಪುರುಷೋತ್ತಮ । ನೀ ಸಲಹುವದಧೋಕ್ಷಜಾ ॥ ೪ ॥ ಕೃತಿಗೆ ಗೋಚರ ನಾರಸಿಂಹನೇ । ಅಚ್ಯುತ ಜನಾರ್ದನ ಉಪೇಂದ್ರನೇ ॥ ಚತುರ್ವಿಂಶತಿ ನಾಮದಲ್ಲಿ । ಚತುರಹರಿ ಶ್ರೀಕೃಷ್ಣನೇ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬. ರಾಗ ಕಾಂಬೋಧಿ, ಅಟತಾಳ.

ತೋರಿರೈ ನೀವೆಲ್ಲರು ತೋರಿರೈ ॥ ಪಲ್ಲ ॥ ನಾರಾಯಣನಲ್ಲದ ಅನ್ಯತ್ರ ದೈವವಾ ॥ ಅನುಪಲ್ಲ ॥ ಮಾರಿ ಮಸಣಿ ಬೊಮ್ಮ ಯಾಗಾ । ವರಾಪಿಲ್ಲದೆ ಗತಿ ಇಲ್ಲವು ॥ ಮೂರುಲೋಕದೊಡೆಯ ಎಂದೆನಿಸುವ ಮು । ರಾರಿಯಲ್ಲದೆ ಅನ್ಯತ್ರ ದೈವವಾ ॥ ೧ ॥ ಸುಡುಗಾಡದಾ ಸುಖದ ಕಟ್ಟೆಯ ಕಾವ । ಒಡಲ ಹೊರೆವ ದೈವಗಳಲ್ಲವೆ ॥ ಮೃಡನೊಡೆಯ ಶ್ರೀರಾಮನೆಂದೆನಿಸುವ ಪಾಲ್ । ಗೊಡೆಯನಲ್ಲದೆ ಅನ್ಯತ್ರ ದೈವವಾ ॥ ॥ ೨ ॥ ಮೃತ್ಯು ಮಾಯಾ ಸುದೇವತೆಗಳು ಯೆಲ್ಲ । ಶ್ರೀಕೃಷ್ಣನ ಭೃತ್ಯ. ಕೆಲಸವ ಮಾಡುವವು ॥ ಸತ್ಯಸದಾನಂದ ಸದಮಲಾತ್ಮಕ ಪರ । ತತ್ವ ಪುರದ ರಾಯ ॥ ೩ ॥ ಶ್ರೀಃ ॥

೭. ರಾಗ ಶಂಕರಾಭರಣ, ಅಟತಾಳ.

ಓಲಗ ಸುಲಭವೊ । ರಂಗಯ್ಯನ । ಓಲಗ ಸುಲಭವೊ ॥ ಪಲ್ಲ ॥ ಓಲಗ ಸುಲಭವೊ ಹುಸಿಯಲ್ಲ ಕರು । ಣಾಲವಾಲನಾದ ಕರಿರಾಜವರದನ ॥ ॥ ಅನುಪಲ್ಲ ॥ ಸಂತೆಗೆ ಮಾಡಿದ ಸಾಷ್ಟಾಂಗ ನಮಸ್ಕಾರ । ದಂತೆ ನಿಷ್ಫಲವನ್ಯಭಜಿಸಲೇಕೆ ॥ ಅಂತರಂಗದಲೊಮ್ಮೆ ಹರಿನೀನೇ ಗತಿ ಯೆಂದು । ಚಿಂತಿಸಿದರ ಕಾಯ್ವ ಶ್ರೀರಾಮಚಂದ್ರನ ॥ ೧ ॥ ದೂರಹೋ ಗಲು ಬೇಡ ತೊಡೆಯ ಗುದ್ದಲು ಬೇಡ । ನೀರ ಹೊರಲು ಬೇಡ ನಿಗ ಡದಿ ಬೀಳಬೇಡ ॥ ನಾರಾಯಣನೆಂಬೊ ನರರ ಯೋಗಕ್ಷೇಮ । ಭಾರ ತನ್ನದು ಯೆಂಬೊ ಪ್ರಹ್ಲಾದವರದನ ॥ ೨ ॥ ತಪ್ಪ ಸಾವಿರಗಳ ತಾಳಿ ರಕ್ಷಿಸುವನು । ಕಪ್ಪುಮೇಘದ ಕಾಂತಿಯೆಂದೆನಿಸುವನ ॥ ಸರ್ಪ ಶಯನನಾದ ಸರ್ವಲೋಕೇಶನ । ಅಪ್ರಮೇಯ ನಮ್ಮಪ್ಪ ಶ್ರೀ ಕೃಷ್ಣನ ॥ ೩ ॥ ಶ್ರೀಃ ॥

೮. ರಾಗ ಸಾವೇರಿ, ತ್ರಿಪುಟತಾಳ.

ನಿನಗೆ ನೀನೆ ಕೃಷ್ಣಾ ದಯಮಾಡಿ ಸಲಹೊ ॥ ಪಲ್ಲ ॥ ಯೆನಗೊಂದು ಸಾಧನ ಲೇಸ ಕಾಣಬಾರದು ॥ ಅನುಪಲ್ಲ ॥ ಸ್ನಾನವ ಮಾಡಿ ನಿನ್ನ ಸಂಪದಿಪೆನೆಂದರೆ । ಸ್ನಾನಮಾಡದೆ ಕಪ್ಪೆ ಸರ್ವಕಾಲದಲಿ ॥ ಧ್ಯಾನ ಮಾಡಿ ನಿನ್ನ ಸಂಪದಿಪೆನೆಂದರೆ । ಧ್ಯಾನಮಾಡದೆ ಬಕ ಸರ್ವಕಾಲ ದಲಿ ॥ ೧ ॥ ಜಪವ ಮಾಡಿ ನಿನ್ನ ಸಂಪದಿಪೆನೆಂದರೆ । ಜಪದಲ್ಲಿ ಮನಸು ಯೆನ್ನಾಧೀನವೆ ॥ ಉಪವಾಸವೆ ನಿನ್ನ ಸಾಧನವೆಂಬೆನೆ । ಉಪವಾಸ ವಾಗಿರದೆ ಉರಗ ಸರ್ವಕಾಲದಲಿ ॥ ೨ ॥ ಸನ್ಯಾಸವೇ ನಿನ್ನ ಸಾಧನ ವೆಂಬೆನೆ । ಸನ್ಯಾಸಿಯಿರನೆ ದುರುಳ ರಾವಣನು ॥ ಕನ್ಯಾದಾನವೆ ನಿನ್ನ ಸಾಧನವೆಂಬೆನೆ । ಕನ್ಯಾದಾನ ಮಾಡನೆ ಕಂಸ ಜರಾಸಂಧಗೆ ॥ ೩ ॥ ಜಾತಿಯೆ ನಿನ್ನ ಸಾಧನವೆಂಬೆನೇ । ದಿತಿ ಕಶ್ಯಪಸುತರು ದೈತ್ಯರಾ ದರು ॥ ಭೂತಿಯೆ ನಿನ್ನ ಸಾಧನವೆಂಬೆನೆ । ಭೂತಿ ಇರದೆ ದುರುಳ ದುರ್ಯೋಧನಗೆ ॥ ೪ ॥ ಬಂಧುತ್ವದಲಿ ನಿನ್ನ ಬಳಿಗೆ ಸೇರುವೆನೆನೆ ।

ಬಂಧುತ್ವವಿರದೇನೊ ಶಿಶುಪಾಲಗೆ ॥ ಮಂದಮತಿಯು ನಾನು ಮಧು ಸೂದನನರಿಯೆ । ನೆಂದೆಂದಿಗು ಯೆನ್ನ ತಂದೆ ಕಾಯೊ ನೀನೆ ॥ ೫ ॥ ಗರುವದಿಂದಲಿ ನಾನು ಮಾಡಿದ ಅಪರಾಧ । ಧರಿಸದೆ ಸಲಹಯ್ಯ ಗೋಪಾಲನೆ ॥ ಶರಣಾಗತರನ್ನು ಪೊರೆವೆನೆಂಬೊ ಬಿರಿದು । ಧರಿಸಿ ಮರೆವರೆನೊ ಪರಮಾತ್ಮ ಶ್ರೀಕೃಷ್ಣ ॥ ೬ ॥ ಶ್ರೀಃ ॥

(ಒಂದು ನುಡಿ ಕಡಿಮೆ ತೋರುತ್ತದೆ)

೯. ರಾಗ ಶಂಕರಾಭರಣ, ಆದಿತಾಳ.

ದಾರಿಯ ತೋರೊ ಗೋಪಾಲ ॥ ಪಲ್ಲ ॥ ವಾರಿಜನಾಭ ಶ್ರೀವೈಕುಂಠ ಲೋಲ ॥ ಅನುಪಲ್ಲ ॥ ಸಿಕ್ಕಿದೆ ಭವ ಕಡಲೊಳಗೆ । ಲೆಕ್ಕವಿಲ್ಲದೆ ಜಂತುಗ ಳಿಗೆ ॥ ದಿಕ್ಕೊಬ್ಬರು ಇಲ್ಲ ಯೆನಗೆ । ಕಕ್ಕಸವ ಕಾಯ್ದು ದಿವ್ಯ ಪಾದದೊ ಳಗೆ ॥ ೧ ॥ ಗಜ ರಕ್ಷಕ ನೀನೆಂದು । ಅಜರುದ್ರಾದಿಗಳೆಂದು ॥ ನಿಜವಾಗಿ ಪೊಗಳುವರೆಂದು । ಸುಜನರ ನೋಡಿ ಕೇಳದೆ ನಾನೆಂದು ॥ ೨ ॥ ವರ ದತುರಂಗವದನ ಬಾರೈ । ಕರದೆ ನಿನ್ನ ದಾರಿಯ ದೋರೈ ॥ ಪರಮ ಭಕ್ತರೊಳಗೆ ಇನ್ನಾರೈ । ಪರಮಪಾವನ ಕೃಷ್ಣ ನೀನಲ್ಲದೆ ಇನ್ನಾರೈ ॥ ೩ ॥

೧೦. ರಾಗ ಸಾವೇರಿ, ತ್ರಿಪುಟತಾಳ.

ನಿನಗಾರು ಸರಿಯಿಲ್ಲವೆನಗನ್ಯ ಗತಿಯಿಲ್ಲ ॥ ಪಲ್ಲ ॥ ನಿನಗೆ ಯೆನಗೆ ನ್ಯಾಯ ಪೇಳುವರಿಲ್ಲ ॥ ಅನುಪಲ್ಲ ॥ ಒಂದು ಗೂಡಿನೊಳು ಒಂದುಕ್ಷಣ ಅಗಲದೆ । ಯೆಂದೆಂದು ನಿನ್ನ ಪಾದ ಪೊಂದಿರಲಾಗಿ ॥ ಬಂದ ವಿಷಯಂ ಗಳಿಗೆ ಯೆನ್ನ ಒಪ್ಪಿಸಿಕೊಟ್ಟು । ಅಂಧಗಾರನಂತೆ ನೀ ನೋಡುವದು ಧರ್ಮವೆ ॥ ೧ ॥ ಪರಸತಿಯರ ಕಂಡು ಪರಮ ಪಾಪಿಯೆಂದು । ಪರಿ ಪರಿ ನರಕಗಳ ನೇಮಿಸುವರೆ ॥ ಪರಸತಿಯರ ಒಲಿಮೆ ನಿನಗೆ ಒಪ್ಪಿತು ಸ್ವಾಮಿ । ದೊರೆತನಕೆ ಅಂಜಿ ನಾ ಶರಣೆಂಬೆನಲ್ಲದೆ ॥ ೨ ॥ ನಿನ್ನಾಧೀನ ದವ ನಿನ್ನ ಪ್ರೇರಣೆಯಿಂದ । ಅನಂತ ವಿವಿಧ ಕರ್ಮವ ಮಾಡಿದೆ ॥

ಎನ್ನಪರಾಧಂಗಳು ಎಣಿಸದೆ ತಂದೆ ನೀ । ಮನ್ನಿಸೊ ಸತತ ಶ್ರೀಕೃಷ್ಣ ಮೂರುತಿಯೆನ್ನ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೧. ರಾಗ ಕಾಂಬೋಧಿ, ಅಟತಾಳ.

ಎನ ಬಿಂಬ ಮೂರುತಿಯ ಪೂಜಿಪೆನು ನಾನು ॥ ಪಲ್ಲ ॥ ಮನಮುಟ್ಟಿ ಅನುದಿನ ಮರೆಯದೆ ಮರೆಯದೆ ॥ ಅನುಪಲ್ಲ ॥ ಗಾತ್ರವೇ ಮಂದಿರ ಹೃದಯವೇ ಮಂಟಪ । ನೇತ್ರವೇ ಮಹದೀಪ ಹಸ್ತ ಚಾಮರವು ॥ ಯಾತ್ರೆಯೇ ಪ್ರದಕ್ಷಿಣೆ ಶಯನವೇ ನಮಸ್ಕಾರ । ಸ್ತೋತ್ರವಮಾತುಗಳೆಲ್ಲ ಮಂತ್ರಗಳೂ ॥ ೧ ॥ ನುಡಿವ ಶಬ್ದಗಳೆಲ್ಲ ಪುಷ್ಪಗಳಾದವು । ನಡೆವುದೆಲ್ಲವು ಬಹುನಟನೆಗಳು ॥ ಉಡುವ ಹೊದ್ದಿಕೆಯೆಲ್ಲವು ಚಿತ್ರವಾದ ವಸ್ತ್ರ । ತೊಡುವ ಭೂಷಣಗಳು ಶ್ರೀಹರಿಗೆ ಆಭರಣ ॥ ೨ ॥ ಧರಿಸಿದ ಶ್ರೀಗಂಧ ಹೃದಯಕ್ಕೆ ಗಂಧವು । ಶಿರದೊಳೆ ಮುಡಿವ ಪುಷ್ಪವೆ ಮಾಲಿಕೆ ॥ ಸ್ಥಿರವಾಗಿ ನೇಹದಿ ಕೂಡಿದಾ ಬುದ್ಧಿಯು । ಸ್ಮರಿಸಿ ಉಂಡನ್ನವೆ ಹರಿನೈವೇದ್ಯವೂ ॥ ೩ ॥ ಎನ್ನ ಸ್ವರೂಪವೆಂಬ ರನ್ನದ ಕನ್ನಡಿ । ಎನ್ನ ಮನೋವೃತ್ತಿಯೆಂಬುದೆ ಕ್ಷೇತ್ರವು ॥ ನಾನು ನುಡಿವ ಹರಿನಾಮಾಮೃತವೇ ತೀರ್ಥ । ಎನ್ನ ಮಂದಿರ ಮಧ್ಯ ಮಹಸಿಂಹಾಸನಾ ॥ ೪ ॥ ಅನ್ಯಸಾಧನವೇಕೆ ಅನ್ಯಪ್ರತಿಮೆಯೇಕೆ । ಅನ್ಯವಾದ ಮಂತ್ರತಂತ್ರಗಳೇಕೆ ॥ ಎನ್ನಲ್ಲಿ ಭರಿತ ಸಾಧನಗಳು ಇರಲಾಗಿ । ಚನ್ನಾಗಿ ಶ್ರೀಕೃಷ್ಣಸ್ವಾಮಿಗೆ ಪೂಜಿಪೆ ॥ ೫ ॥ ಶ್ರೀಃ ॥

೧೨. ರಾಗ ಮೋಹನ, ಅಟತಾಳ.

ಜನುಮ ಜನುಮದಲ್ಲಿ ಕೊಡುಕಂಡ್ಯ ಹರಿಯೆ ॥ ಪಲ್ಲ ॥ ಅನಿಮಿತ್ತ ಬಂಧು । ಕೃಷ್ಣ ಯೆನಗೆ ನೀನು ॥ ಅನುಪಲ್ಲ ॥ ಮೆರೆವ ಊರ್ಧ್ವಪುಂಡ್ರ ಯೆರಡಾರು ನಾಮವು । ಕೊರಳಲ್ಲಿ ತುಳಸಿ ವನಮಾಲೆಯು ॥

ಹೊಳೆವ ಸುದರ್ಶನ ಎಡದಲ್ಲಿ ಶಂಖವು । ಮೆರವುತ ಹಿಗ್ಗುವ ವೈಷ್ಣವ ಜನ್ಮವ ॥ ೧ ॥ ತಾರತಮ್ಯ ಪಂಚಭೇದದಿಂದಲಿ । ತೋರುವ ಜಗತು ಸತ್ಯವೆಂದೂ ॥ ಮಾರಾರಿಮುಖ ಸುರರು ನಿನ್ನ ಚರಣವ । ಸೇರಿದವರು ನಿತ್ಯವೆಂಬೊ ಸನ್ಮತಿಯನು ॥ ೨ ॥ ಸಕಲ ಬುಧರೋತ್ತಮರಲ್ಲಿ ನಮ್ರತೆಯು । ಸುಖತೀರ್ಥರಲ್ಲಿ ಗುರುಭಕುತಿಯು ॥ ಸಕಲ ಸುರರೊಡೆಯ ಶ್ರೀಕೃಷ್ಣ ನಿನ್ನಲ್ಲಿ । ಅಕಳಂಕವಾದ ನವವಿಧ ಭಕುತಿಯು ॥ ೩ ॥

೧೩. ರಾಗ ಕಾಂಬೋಧಿ, ಅಟತಾಳ.

ಬಿಗೆಯದಿರು ಬಗೆಯದಿರು ಎಲೊ ಮಾನವಾ ॥ ಪಲ್ಲ ॥ ಧಿಗಿಧಿಗಿಧಿಗಿಯೆನುವೆ ನಿನಗೇಕೊ ಗರುವಾ ॥ ಅನುಪಲ್ಲ ॥ ವಿರತಿಯಲಿ ಕುಮಾರನೆ ವಿವೇಕದಲಿ ವಸಿಷ್ಠನೆ । ಶೂರತನದಲಿ ಶಾಂತನವನೇನೊ ನೀನು ॥ ಸ್ವರದಲ್ಲಿ ತುಂಬುರನೆ ನೃತ್ಯದಲಿ ನಾರದನೆ । ಪರಾಶರನೇ ನೀನು ಉಗ್ರ ತಪಸಿನಲ್ಲಿ ॥ ೧ ॥ ಚೆಲುವಿಕೆಯಲಿ ರಾಮನೆ ಕ್ಷಮೆಯಲ್ಲಿ ಹರಿಶ್ಚಂದ್ರನೆ । ಕುಲದಲ್ಲಿ ಋಷಿವಿಶ್ವಾಮಿತ್ರನೇನೊ ॥ ಬಲದಲ್ಲಿ ವಾಲಿಯೆ ಛಲದಲ್ಲಿ ಹಿರಣ್ಯಾಕನೆ । ಬಿಲುವಿದ್ಯೆಯಲಿ ವರಪರಶುರಾಮನೇನೋ ॥ ೨ ॥ ಭೋಗದಲಿ ಶತಮುಖನೆ ತ್ಯಾಗದಲಿ ಕರ್ಣನೆ । ಯೋಗದಲಿ ಶುಕಸನಕ ಜನಕನೇನೋ ॥ ಭಾಗ್ಯದಲಿ ದಶಶಿರನೆ ಭೋಗದಲಿ ಇಂದ್ರನೆ । ದೀರ್ಘದಲಿ ಮೇರುಮಂದರವೆ ನೀನೂ ॥ ೩ ॥ ಭಕ್ತಿಯಲಿ ಭರತನೋ ಭಾವದಲಿ ಲಕ್ಷ್ಮಣನೊ । ಯುಕ್ತಿಯಲಿ ನೀನೀಗ ಸೂತನೇನೊ ॥ ಶಕ್ತಿಯಲಿ ಕಾಲನೆ ಆಹಾರದಲಗಸ್ತ್ಯನೆ । ಮುಕ್ತಿಯಲಿ ಖಟ್ವಂಗರಾಯನೇನೊ ॥ ೪ ॥ ಶಾಪದಲಿ ಬ್ರಹ್ಮನೆ ತಾಪದಲಿ ಸೂರ್ಯನೇ । ಕೋಪದಲಿ ಮಹೇಶನೇನೊ ॥ ತಪದಲ್ಲಿ ಹನುಮನೆ ವ್ರತದಲ್ಲಿ ರುಕ್ಮಾಂಗದನೆ । ಕೃಪೆಯಲ್ಲಿ ಶ್ರೀಕೃಷ್ಣನೇನೊ ನೀನೂ ॥ ೫ ॥ ಶ್ರೀಃ ॥

೧೪. ರಾಗ ಮೋಹನ, ಆದಿತಾಳ.

ತೋರೇ ಬೇಗನೆ ತೋಯಜನಯನೆ ಮದವಾರಣಗಮನೆ ॥ ಪಲ್ಲ ॥ ವಣರನ ತಾಪವ ಸೈರಿಸಲಾರೆನೆ । ನೀರೆ ನಿನಗೆ ಮುತ್ತಿನ ಹಾರ

ಕೊಡುವೆನೆ ॥ ಅನುಪಲ್ಲ ॥ ನೀರೊಳು ಮುಣುಮುಣುಗಾಡುತ ಬಂದು। ಮಥಿಸಿದ ದಯಾಸಿಂಧು ॥ ಧಾರುಣಿ ಚಿಮ್ಮಿ ಮೇಲಕೆ ತಂದು। ದನುಜನ ಕೊಂದು ॥ ಮೂರು ಪಾದವ ಬೇಡುತ ಬಂದ । ಮುನಿಕುಲ ದಯಾಸಿಂಧು ॥ ನಾರಿ ಬಿಡದೆ ಪರನಾರಿಯರಾಳುವ । ತೋರ ಮಣಿಯು ಹಯವೇರಿ ಮೆರೆದನಾ ॥ ೧ ॥ ಕತ್ತಲೆಯೊಡನೆ ಕಾದಿದ ಧೀರ ನೆಗಹಿದ ಪರಿವಾರ॥ ಕಿತ್ತು ಮಣ್ಣಾಗಿದು ಮೆದ್ದನು ಬೇರ । ಕುಜನ ಕುಠಾರ ॥ ವತ್ತಿದ್ದ ಬಲಿಯು ಕಾಯಿದನು ಶೂರದಾನವ ಸಂಹಾರ॥ ಹತ್ತು ಶಿರವ ಕತ್ತರಿಸಿ ಗೋಕುಲದೊಳು । ಬತ್ತಲೆ ರಾಹುತನಾಗಿ ಮೆರೆದನಾ ॥ ೨ ॥ ನಿಗಮ ಕದ್ದವನ ನೀಗಿದ ದಿಟ್ಟ । ನೆಗಹಿದ ಘನಬೆಟ್ಟ ॥ ಮಿಗಿಲೊಮ್ಮೆ ಸ್ವಹಸ್ತತಳದಲಿಟ್ಟ । ಘುಡಿಘುಡಿಸುವ ಸಿಟ್ಟ ॥ ಜಗವೆಲ್ಲ ನೋಡಿ ಯೆರಡಡಿ ಇಟ್ಟ । ಕೊಡಲಿಯ ಪೆಟ್ಟ ॥ ಮೃಗವ ಕೆಡಹಿ ಕುಂತಿಮಗನ ಸಾರಥಿಯಾಗಿ । ಜಗವ ಮೋಹಿಪ ಹಯವದನ ಶ್ರೀಕೃಷ್ಣ ॥ ೩ ॥

೧೫. ರಾಗ ಕಲ್ಯಾಣಿ, ಆದಿತಾಳ.

ಮನ್ನಿಸೆನ್ನ ಮನ್ಮಥ ಜನಕ ಮಧುಸೂದನ। ಮಂದರೋದ್ಧರ ॥ ॥ ಪಲ್ಲ ॥ ನಿನ್ನ ನಂಬಿದೆ ನಿಶ್ಚಯದಿ ನಿರಂತರದಿ । ಇಹಪರದಲಿ ಕಾಯೋ॥ ॥ ಅನುಪಲ್ಲ ॥ ಶ್ರೀರಂಗ ಖಗತುರಂಗ ಜಗದಂತರಂಗ । ವಿಧಿ ಕುರಂಗ ಧರನಮಿತ್ರ । ಸಾರಂಗ ಪರಿಪಾಲ ಸುಗುಣಜಾಲ ಲಕುಮಿಲೋಲ ಕೃ । ಪಾರಸತರಂಗಿತಾಪಾಂಗ । ದುರಿತ ಭಂಗಾ ಧೃತರಥಾಂಗ ಶುಭಾಂಗ ॥ ೧ ॥ ಕಾರುಣ್ಯನಿಧಿ ಹಿರಣ್ಯವತ್ಸಲ ಲೋಕ । ಶರಣ್ಯ ದೇವ ವರೇಣ್ಯ ಘನಶ್ಯಾಮಾ ॥ ಚರಣಕಮಲಕ್ಕೆ ಶರಣುಹೊಕ್ಕೆ ತಾಮಸ ವೇಕೆ ಸಲಹೊ ಶ್ರೀ । ವರೇಣ್ಯ ಯದುವೀರ ದುರಿತದೂರಾ ವೇದ ಸಾರ । ಗಂಭೀರಾ ॥ ೨ ॥ ಸನಂದನಾದಿ ಮುನೀಂದ್ರ ಪ್ರಿಯ ಸಚ್ಚಿ । ದಾನಂದ ನಂದಗೋಪತನಯ । ಏನೆಂದು ಪೇಳಲಯ್ಯ ನಿನ್ನ ಮಾಯಾ ॥ ಮರೆಯುಲರಿಯ ಯುಧಿಷ್ಠಿರ । ಧನಂಜಯ ಸಹಾಯ ಕೃಷ್ಣರಾಯ ಸುಹೃದಗೇಯ ಸುಜೇಯ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೬. ರಾಗ ನಾಟಿ, ಅಟತಾಳ.

ಎಂತು ಪೊಗಳುವೆ ನಿಮ್ಮ ಯತಿಕುಲಶಿರೋರನ್ನ ॥ ಪಲ್ಲ ॥ ಶಾಂತ ಮಧ್ವಾಚಾರ್ಯ ಶರಣು ಮುನಿವರ್ಯ ॥ ಅನುಪಲ್ಲ ॥ ಪ್ರಥಮಾವತಾರದಲಿ ಪ್ರಥಿತ ರಾಮನ ಭಜಿಸಿ । ಅತಿಪಂಥದಿಂದ ಶರಧಿಯನು ಪ್ಲವಿಸಿ ॥ ಪೃಥ್ವಿಜೆಗಂಕಿತವಿತ್ತು ಪುರದೋಟವನು ಕಿತ್ತು ಪ್ರತಿಯಾರೊ ನಿನಗೆ । ಅಪ್ರತಿಪರಾಕ್ರಮನೆ ॥ ೧ ॥ ದ್ವಿತೀಯಾವತಾರದಲಿ ದೇವಕಿಜನ ಕಂಡೆ । ಸತಿಗೆ ಕಾಮಿಸಿದವನ ಸಾಹಸದಿ ಸದೆದೆ ॥ ಮತಿಗೆಟ್ಟ ಮಾಗಧನ ಕಾಳಗದಿ ಛೇದಿಸಿದೆ । ಮಿತಿಯು ಕಾಣೆನೊ ನಿನಗೆ ಮೂಲೋಕದೊಳಗೆ ॥ ೨ ॥ ತೃತೀಯಾವತಾರದಲಿ ತ್ರಿಜಗವು ನುತಿಸುವ ತೆರವಿ । ಅತುಳ ತಪದಿಂದ ಪರಮ ಮಹಿಮನ ಭಜಿಸಿ ॥ ಕ್ಷಿತಿಗಧಿಕ ಉಡುಪಿಯಲಿಶ್ರೀಕೃಷ್ಣನ ನಿಲ್ಲಿಸಿ । ಪ್ರತಿಮತವ ಮುರಿದೆ ಪೂರ್ಣಪ್ರಜ್ಞತೆಯ ಮೆರೆದೆ ॥ ೩ ॥ ಶ್ರೀಃ ॥

೧೭. ರಾಗ ಪೂರ್ವಿ, ಆದಿತಾಳ.

ಮಹಿಮೆ ಸಾಲದೆ । ಇಷ್ಟು । ಮಹಿಮೆ ಸಾಲದೆ ॥ ಶ್ರೀಪಾದರಾಯರ ಮಹಿಮೆ ಸಾಲದೆ ॥ ಪಲ್ಲ ॥ ಅಹಿಶಯನನ ಒಲಿಮೆಯಿಂದ । ಮಹಿಯೊಳೊಮ್ಮೆ ಶ್ರೀಪಾದರಾಯರ ॥ ಅನುಪಲ್ಲ ॥ ಮುತ್ತಿನ ಕವಚ ಮೇಲ್ತುರಾಯಿ । ರತ್ನ ಕೆತ್ತಿದ ಕರ್ಣಕುಂಡಲಾ ॥ ಕಸ್ತುರಿತಿಲಕ ಶ್ರೀಗಂಧಲೇಪನ । ವಿಸ್ತಾರದಿಂದ ಮೆರೆದು ಬರುವ ॥ ೧ ॥ ವಿಪ್ರಗೆ ಹತ್ಯದೋಷ ಬರಲು । ಕ್ಷಿಪ್ರಶಂಖೋದಕವ ತಳಿಯೆ ॥ ಅಪ್ರಬುದ್ಧರು ದೂಷಿಸೆ ಕೇರೆಣ್ಣೆ । ಕಪ್ಪುವಸನ ಶುಭ್ರಮಾಡಿದ ॥ ೨ ॥ ಹರಿಗೆ ಸಮರ್ಪಿಸಿದ ನಾನಾ । ಪರಿಯ ಶಾಕಗಳನ್ನು ಭುಂಜಿಸೆ ॥ ನರರು ನಗಲು ಶ್ರೀಕೃಷ್ಣನ । ಕರುಣದಿಂದ ಪಾಸಿಯ ತೆಗದ ॥ ೩ ॥ ಶ್ರೀಃ ॥

೧೮. ರಾಗ ನಾಟಿ, ಅಟತಾಳ.

ವಾದಿಗಜಮಸ್ತಕಾಂಕುಶ ಸುಜನ ಬುಧಗೇಯ । ಮೇದಿನೀಸುರವಂದ್ಯ ಶ್ರೀಪಾದರಾಯ ॥ ಪಲ್ಲ ॥ ಸಕಲಶಾಸ್ತ್ರ ಕಲಾಪ ಸನ್ಯಾಸಕುಲ

ದೀಪ । ಸಕಲ ಸತ್ಯಸ್ಥಾಪ ಸುಜ್ಞಾನಲೇಪ ॥ ಸಕಲ ಪಾವನ ರೂಪ ಅರಿಕುಲಜನವುತಲೇಪ । ಸಕಲವರ್ಜಿತ ಪಾಪ ಕೀರ್ತಿ ಪ್ರತಾಪ ॥ ೧ ॥ ಹಂಪದಾಂಬುಜ ಭೃಂಗ ಪರವುತಾ ವಿಹಂಗ । ಪರವು ಸುಗುಣಾಂತ ರಂಗ ಪರಹಿತೋತ್ತುಂಗ ॥ ಪರವು ಸುಕೃತಾಸಂಗ ಶೃತಿ ತಿಮಿರಪ ತಂಗ । ಶರಣು ಶುಭಚರಿತಾಂಗ ಷಟ್ಶಾಸ್ತ್ರಸಂಗ ॥ ೨ ॥ ಸಿರಿಕೃಷ್ಣ ದಿವ್ಯ ಪಾದಾಬ್ಜಾತುಲಲೋಲ । ವರ ಹೇಮವರ್ಣ ಮುನಿಪತಿಯ ಸುಕುಮಾರ ॥ ಗುರುತಿಲಕ ಶ್ರೀಪಾದರಾಯ ಅವಿತೋದ್ಧಾರ । ಕರುಣ ನಿಧಿ ಸುರಧೇನು ಭಕ್ತಮಂದಾರ ॥ ೩ ॥ ಶ್ರೀ ॥

## ೧೯. ರಾಗ ನಾಟಿ, ಅಟತಾಳ.

ಜಯ ಜಯ ಜಯರಾಯಾ ॥ ಪಲ್ಲ ॥ ದಯದಿಂದ ಪಾಲಿಸೊ ಮಹ ರಾಯ ॥ ಅನುಪಲ್ಲ ॥ ಪ್ರತಿ ಜನ್ಮದಿ ತ್ವಚ್ಚರಣದಲಿ ಸ । ದ್ರತಿಯನಿತ್ತು ಕಾಯೊ ಕರುಣದಲಿ ॥ ಅತಿ ಬಲದಿಂ ಹೃದ್ಗತ ತಮವಳಿದು । ನ್ನತಿ ಯನು ಕೊಡು ಸನ್ನುತ ಬರದಿ ॥ ೧ ॥ ಅಚ್ಯುತ ಪದಾಂಬುಜ ಭೃಂಗ ನಿ । ನ್ನರ್ಚನೆಯನು ಕೊಡು ಕಮಲಾಂಗ ಗುರು ॥ ತ್ವಚ್ಚರಿತೆಯ ತೋರೊ ಗುಣಸಾಂದ್ರಾ । ಪ್ರಚ್ಯುತದೂಷಣ ಸಚ್ಚಿತಭೂಷಣ ಮೆಚ್ಚಿಸೆ ನಿನ್ನನು ಮುನಿತುಂಗ ॥ ೨ ॥ ಬೃಂದಾರಕ ವೃಂದಾರಾಧ್ಯ ಅಘ । ಬೃಂದ ವಿಧುರ ಕುಜನಾಭೇದ್ಯ ಆ ॥ ನಂದತೀರ್ಥರ ಮತಜನಬೋಧ್ಯ । ಸುಂದರಕಾಂಡದಿಂದಿಹ ಕೃಷ್ಣನ ವಂದಿಪ ಸದ್ಗುರು ನಿರವದ್ಯ ॥ ೩ ॥

## ೨೦. ರಾಗ ತೋಡಿ, ಆದಿತಾಳ.

ಧೀರನ ನೋಡಿರೈ । ಕರುಣಾ । ಪಾರನ ನೋಡಿರೈ ॥ ಪಲ್ಲ ॥ ವಾರಿಜವದನ ಸವಿಾರಜ ಕಪಿನೃಪ ದ್ವಿಜನಾಭಾವಿಅಜನಾ ॥ ಅನುಪಲ್ಲ ॥ ಕಣಿಕಾಲಂ ದುಗೆ ಒಪ್ಪುವಸರ ಕಂಠಮಣಿಯಾ । ವಜ್ರದ ಕಣಿಯಾ । ಮಣಿಯದ ಬಹಳ ಕಠಿಣ ದಿತಿಜರನೆಲ್ಲ ಹಣಿಯು । ಬೇಕೆಂಬ ಧಣಿಯಾ । ತ್ರಣು ತಿಸಿ ನಾರಾಯಣ ಪದ ಭಕ್ತಾಗ್ರಣಿಯು । ಚಿಂತಾಮಣಿಯು । ತೃಣಾಕೃತ

ಮರಪತಿ ವೀಶೋವಹಾಧವ ಫಣಿಯು। ಕಪಿಶಿರೋಮಣಿಯು ॥೧॥ ಮಂದ ಸ್ಮಿತಯುತ ಕುಂದಕುಡ್ಮಲ ಸಮರದನಾ। ಪೂರ್ಣಚಂದ್ರ ವದನಾ। ಇಂದುಧರಾದಿ ಸುರವೃಂದ ವಂದಿತ ಪದಯುಗನಾ । ಹಸ್ತದ ನಗನಾ॥ ಬಂದೀಕೃತಮರ ಸುಂದರಿ ಸಮುದಯ ಸದನಾ। ಜಿತನಿಕಮದನಾ ॥ ಮಂದಮತ ಜರಾಸಂಧನಂಗವ ಸೀಳಿದನಾ । ಬಹು ಬಲ್ಲಿದನಾ ॥ ೨ ॥ ಮುದ್ದು ಮುಖವ ನೋಡಿ ತಿದ್ದಿಮಾಡಿದ ವೈಸಿರಿಯಾ ಇನ್ನೊಮ್ಮೆ ಧೊರಿಯಾ । ಒದ್ದಕ್ಷ ಕುವರನಾ ಗುದ್ದಿ ಬಿಸುಟ ಹೊಂತಕಾರಿಯಾ। ಭಾರತಿ ಧೊರಿಯಾ॥ ಶುದ್ಧಾನಂದ ಸಮುದ್ರ ಶ್ರೀಕೃಷ್ಣಗೆ ಕಿರಿಯ। ಮಿಕ್ಕ ಜನಕ್ಹರಿಯ। ಅದ್ವೈತಶಾಸ್ತ್ರದ ಸದ್ದಡಗಿಸಿದ ಆರ್ಯ। ನಮ್ಮ ಮಧ್ವಾಚಾರ್ಯ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೧. ರಾಗ ಮೋಹನ, ಅಟತಾಳ.

ಪತ್ರವ ಕಳುಹಿದಳಾ ರುಕ್ಮಿಣಿದೇವಿ। ಪತ್ರವ ಕಳುಹಿದಳು ॥ ಪಲ್ಲ ॥ ಪತ್ರವ ನೋಡಿ ಗೌರಿಯಾತ್ರಾ ಕಾಲದಿ ಕೃಷ್ಣ। ಗಾತ್ರಪವಿತ್ರ ಮಂಗಳ ಸೂತ್ರ ಕಟ್ಟೆಂದು ॥ ಅನುಪಲ್ಲ ॥ ನಮ್ಮಣ್ಣ ನಮ್ಮ ತಂದೆಯಾ ಮಾತು ಕೇಳದೆ। ನಿಮ್ಮ ದೂಷಿಸಿ ನೀಚಗೆ ॥ ನಮ್ಮನು ಇತ್ತು ಮೂರೇಳು ಕುಲಗಳನೂ । ಘಮ್ಮನೆ ನರಕದೊಳ್ ಮುಣುಗಿಸುತ್ತಾನೆಂದು ॥ ೧ ॥ ಸುಣ್ಣಜಾಜಿಗಳಿಂದ ಗ್ರಾಮಗ್ರಾಮಗಳ ಪೂಸಿ। ರನ್ನದ ತೋರಣಗಳ ಕಟ್ಟಿ ॥ ಪುಣ್ಯಾವಾಚನೆ ಮಾಡಿಸಿ ವಿಪ್ರರಿಂದ । ಪೂರ್ಣಫಲ ಮಂಟಪ ಸ್ಥಾಪಾಯಿತೆಂದು ॥ ೨ ॥ ನೀ ಬಾರದಿದ್ದರೆ ಹಬ್ಬ ಸುರಾಯಿತು । ತಬ್ಬಿಬ್ಬ ಆಗೋದು ಕುಲಕೆಲ್ಲ॥ ಅಬ್ಬರದಿಂದ ಗರುಡಗಮನ ಬಂದು । ತಬ್ಬಿಕೊಂಡೊಯ್ಯೊ ಶ್ರೀಕೃಷ್ಣ ಬೇಗಾ ॥ ೩ ॥ ಶ್ರೀಃ ॥

೨೨. ರಾಗ ಪೂರ್ವಿ, ಅಟತಾಳ.

ದೂರಕೆ ದೂರನೆಂದು ಹೊರಸಾರಲು ಬೇಡಿ ॥ ಪಲ್ಲ ॥ ಸಾರರ ಸಾರಿ ನಮ್ಮ ಕೃಷ್ಣನ ಸಾರಿರೈಯ ॥ ಅನುಪಲ್ಲ ॥ ಅನಂತ ರೂಪದೊಳು ಒಂದು

ರೂಪವಾ । ಅನಂತ ಗುಣದೊಳು ಒಂದು ಗುಣವಾ ॥ ಅನಂತ ನಾಮ ದೊಳೊಂದೆ ನಾಮವ । ಮನಸಿಲಿ ನೆನೆದರೆ ಬೆನ್ನಹತ್ತಿ ಬಿಡನಯ್ಯ ॥ ॥ ೧ ॥ ಅನಂತ ಜೀವರೊಳಾವನಾದರು ಒಮ್ಮೆ । ಅನಂತ ಜನ್ಮದೊ ಳೊಂದೆ ಜನ್ಮನಾ ॥ ಅನಂತ ಕ್ಷಣದೊಳೊಂದೆ ಕ್ಷಣವಾ । ಕನಸಿಲಿ ನೆನ ದರೆ ಋಣಿಯಾಗಿಪ್ಪನಯ್ಯ ॥ ೨ ॥ ಒಂದೆ ಹೂವು ವೊಂದೆಫಲ ವೊಂದೆ ಬಿಂದುಜಲ । ಒಂದೆ ತುಳಸಿದಳ ವೊಂದೆ ಪದಾನೆ ॥ ಒಂದೆ ಪ್ರದಕ್ಷಿಣೆ ಅವಗರ್ಪಿಸಿದರೆ । ಎಂದೆಂದು ಕುಂದದ ಆನಂದ ನೀವನಯ್ಯ ॥ ೩ ॥ ಹರಿಚಿಹ್ನಾಂಕಿತ ಹರಿದಿನ ಉಪವಾಸ । ಹರಿಯೂರ್ಧ್ವಪುಂಡ್ರ ತುಳಸಿ ಮಾಲಿಕೆ ॥ ಹರಿಉತ್ಸವ ಸೇವೆ ಹರಿದಾಸರ ಸಂಗ । ದುರಿತ ಅಬ್ಧಿಗೆ ಕುಂಭಸಂಭವನಲ್ಲವೆ ಕೃಷ್ಣ ॥ ೪ ॥ ಹರಿಪಾದ ತೀರ್ಥ ಹರಿನೈವೇದ್ಯ । ಹರಿಆರತಿ ಧೂಪ ಶ್ರೀಪಾದಾಂಗಾರ ॥ ಹರಿನಿರ್ಮಾಲ್ಯ ಪ್ರತ್ಯೇಕ ಶಂಖೋ ದಕ । ದುರಿತರಾಶಿಗಳ ಸೋಲಿಸಿ ಸುಡುವದಯ್ಯಾ ॥ ೫ ॥ ಒಮ್ಮನೆ ನಡೆ ದಡೆ ಒಮ್ಮನೆ ಕರೆದಡೆ । ವೊಮ್ಮೆ ಪಾಡಿದಡೆ ವೊಮ್ಮೆ ಪೊಗಳಿದಡೆ । ಒಮ್ಮೆ ನೋಡಿದಡೆ ಒಮ್ಮೆ ನೆನಸಿದಡೆ । ಎಂದೆಂದು ಕುಂದದ ಆನಂದ ನೀವನಯ್ಯ ॥ ೬ ॥ ತನ್ನಲಿಪ್ಪನಾಗಿ ದೂರನೆಂತೆನಬೇಡ । ಹೊನ್ನು ಹಣವು ಬೇಡ ಶ್ರೀಲಕ್ಷ್ಮೀಪತಿಗೆ ॥ ಅನ್ಯವೇತಕೆ ಪೂರ್ಣಾನಂದಗೆ । ನಿನ್ನವನೆಂದರೆ ತನ್ನನೀವ ಕೃಷ್ಣ ॥ ೭ ॥ ಶ್ರೀ ॥

## ೨೩. ರಾಗ ಸಾವೇರಿ, ಅಟತಾಳ.

ಹರಿದಾಸರ ಸಂಗಕೆ ಸರಿಯುಂಟೆ ॥ ಪಲ್ಲ ॥ ನಿಮ್ಮ । ಗುರು ಕರುಣಕೆ ಇನ್ನು ಸಾಟಿಯುಂಟೆ ॥ ಯೆಲೊ ದೇವಾ ॥ ಅನುಪಲ್ಲ ॥ ದಾವನಲತಪಿಸೆ ಕಾಡಾನೆಯು । ದೇವ ಗಂಗೆಯ ತಂದು ಹೊಗಿಸುವದುಂಟೆ ॥ ಆವಾಗ ಸುಡುವ ಷಡ್ವರ್ಗ ರಾಶಿಗಳನು । ಶ್ರೀವರ ಕರುಣಾಮೃತದಿಂದ ಕೊಯಿ ಸುವಾ ॥ ೧ ॥ ಬಂದಾ ಬೇಸಿಗೆಯಲ್ಲಿ ನೊಂದ ಚಕೋರನ್ನ । ಚಂದ್ರ ಬಿಂಬಕೆ ತಂದು ಹೊಗಿಸುವದುಂಟೆ ॥ ಬಂಧುರ ಮಮತೆಯ ಬಿಡಿಸೆನ್ನ ಮನದಾ । ನಂದಾಬ್ಧಿಯೊಳಗೋಲಾಡುತಲಿಪ್ಪ ॥ ೨ ॥ ಕುರುಡಗೆ

ದಿವ್ಯ ಅಂಜನ ಹಚ್ಚಿ ಕಣ್ಣಿತ್ತು । ತರತರ ಉಂಬಾ ನಿಧಿಯನೀವಂತ ॥ ಪರಮ ಮೂರ್ಖನಾದ ಎನಗೆ ಜ್ಞಾನವನಿತ್ತು । ನರಹರಿಯ ಸನ್ನಿಧಿಯಲ್ಲಿರುವ ದಾರಿಯ ತೋರೊ ॥ ೩ ॥ ಬಲಿದ ಹರಿಯ ಎಳೆಹುಲಿಯ ಮರಿಯ ತಾ । ನಲವಿನಿಂದಲಿ ತಾಯಿ ನಲಿಸುವಂತೆ ॥ ಬಾಲ ಇಂದ್ರಿಗಳೆಂಬ ಶರೆಯ ಬಿಡಿಸಿ ಸಿರಿ । ಹರಿಯ ಸನ್ನಿಧಿಗೆ ದಾರಿಯ ತೋರುವರಾ ॥ ೪ ॥ ದಡೆಯ ಕಾಣದೆ ಮಹನದಿಯೊಳು ಹೋಹನ । ಪಿಡಿದೆತ್ತಿ ತಡಿಯ ಸೇರಿಸುವದುಂಟೆ ॥ ಬಿಡದೆ ಭವಾಬ್ಧಿಯೊಳು ಮುಣುಗಿ ತೆರನಾ । ತಡೆಯದೆ ಕೃಷ್ಣನ್ನ ಮೇಲಡಿಯ ಸೇರಿಸುವರಾ ॥ ೫ ॥

೨೪. ರಾಗ ಕೇದಾರಗೌಳ, ಅಟತಾಳ.

ಆವಾವ ಬಗೆಯಲ್ಲಿ ರಕ್ಷಿಪೆಯೊ ॥ ಪಲ್ಲ ॥ ದೇವಾದಿದೇವ ಶ್ರೀಕೃಷ್ಣ ಸ್ವಾಮಿಯನ ॥ ಪಲ್ಲ ॥ ಹಿಂದಿನ ಕಾಲವು ವ್ಯರ್ಥವಾಗಿ ಕಳೆದೆನೊ । ಮುಂದಿನ ಗತಿ ಚಿಂತೆ ಲೇಶವಿಲ್ಲ ॥ ಕುಂದಿತು ದೇಹದ ಬಲವೆಲ್ಲ । ಸಿರಿ ಕೃಷ್ಣ । ಮಂದವಾಯಿತು ಇಂದ್ರಿಯ ಗತಿಗಳೆಲ್ಲ ॥ ೧ ॥ ಆಶೆಯೆಂಬುವದು ಬ್ರಹ್ಮಾಂಡ ಮುಟ್ಟುತಲಿದೆ । ಕಾಸು ಹೋದಡೆ ಕ್ಲೇಶವಾಗುತಿದೆ ॥ ಮೋಸಮಾಡಿ ಮೃತ್ಯು ಬಾಹೋದು ನಾನರಿಯೆ । ವಾಸುದೇವ ರಂಗ ದಯದಿಂದ ಪಾಲಿಸೊ ॥ ೨ ॥ ಜನರು ದೇಹವ ಬಿಟ್ಟು ಹೋಹದ ನಾ ಕಂಡು । ಎನದೇಹ ಸ್ಥಿರವೆಂಬೊದೆ ತಿಳಿದು ॥ ದಾನ ಧರ್ಮ ಬಿಟ್ಟು ಹರಿಯ ಧ್ಯಾನವ ಮರೆದು । ಹೀನ ವಿಷಯಂಗಳಿಗೆ ಎರಗುವೆ ಸಿರಿ ಕೃಷ್ಣ ॥ ೩ ॥ ಶ್ರೀಃ ॥

೨೫. ರಾಗ ರೇಗುಪ್ತಿ, ಆದಿತಾಳ.

ನಿನ್ನಾಜ್ಞಾದವನು ನಾ ಎನ್ನನೊಪ್ಪಿಸದೆ । ಬಿನ್ನಹ ಚಿತ್ತೈಸಿ ಎನ್ನ ಪಾಲಿಸೊ ಕೃಷ್ಣ ॥ ಪಲ್ಲ ॥ ಏಳು ಸುತ್ತಿನ ಕೋಟೆಯ ಯಮನಾಳು ಮುತ್ತಿಕೊಂಡು । ಹಾಳು ಮಾಡ್ಯಾರೆಂದು ಹೇಳುತಿರೆ ॥ ಆಳು ಸಮಗ್ರ ಅಪಾರ ಬಲಮಾಡಿ । ಕೊಳ್ಳೆ ಹೋಗದ ಮುನ್ನ ಕೊಟ್ಟು,

ರಕ್ಷಿಸಬೇಕು ॥ ೧ ॥ ಮೂರು ಆರರ ಬಾಧೆ ಆರು ಎಂಟರ ಬಾಧೆ। ಕ್ರೂರರೈವರ ಬಾಧೆ ಹೋರುತಿವೆ ॥ ಆರಿಂದ ನಿರುವಾಹ ಆಗಾದು ಈ ನರನು । ವಿಾರಿ ಇರುವನೊಬ್ಬ ಧೀರನ್ನ ಬಲವಾಡಿ ॥ ೨ ॥ ಲಕ್ಷಎಂಭತ್ತನಾಲ್ಕು ರಾಶಿಯೊಳು ನಾನು । ಸೂಕ್ಷ್ಮದ ಕೋಟಿಂದುಪೇಕ್ಷಿಸದೆ ॥ ಪಕ್ಷಿವಾಹನ ನೀನು ಪ್ರತ್ಯಕ್ಷ ನೀತಾರೇ । ಅಕ್ಷಯ ಬಲವೆನಗೆ ಶ್ರೀ ಕೃಷ್ಣಯ್ಯ ರಕ್ಷಿಸೊ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೬. ರಾಗ ಕಲ್ಯಾಣಿ, ಝಂಪೆತಾಳ.

ಯಾಕೆ ವೃಂದಾವನ ಯಾಕೆ ಗೋಕುಲ ನಮಗೆ। ಯಾಕೆ ಬಂದೆಲೊ ಉದ್ಧವಾ ॥ ಪಲ್ಲ ॥ ಯಾಕೆ ಸ್ನೇಹದ ಮಾತನೇಕಮಹಿಮನು ತಾನು ಆ ಕುಬ್ಜೆಯನು ಕೂಡಿದ । ರಂಗ ॥ ಅನುಪಲ್ಲ ॥ ಬೆಲೆ ಇಲ್ಲ ವೈಯ್ಯನಾ ಬ್ಯಾಟಿ ನಗೆನುಡಿ ನೋಟ ಇಲ್ಲದಂತಾಯಿತಲ್ಲ । ತಲ್ಲಣಿಸುತಿದ್ದೇವೆ ತಾಪ ವ್ಯೆಯೊಳಘೆಚ್ಚಿ ತನುವು ಪರವಶವಾಯಿತು ॥ ಎಲ್ಲರನು ಅಗಲಿಸಿದ ಖುಲ್ಲ ಅಕ್ರೂರ ನಮ್ಮ ವಲ್ಲಭನ ಕರದೊಯ್ವರೆ । ಮಲ್ಲರನು ಮರ್ದಿಸಿದ । ಮಾವಕಂಸನ ಕೊಂದ ಸಿರಿವಲ್ಲಭನ ತೋರಿಸೆಯ್ಯ ॥ ೧ ॥ ಆರು ದಿನವು ಆದರಿಸಿ ಅಧರ ಅಮೃತವನಿತ್ತು ಆನಂದವನು ತೋರುವ। ಮನಸು ಮರ್ಮವ ತಿಳಿಯೆ ಕಿನಸು ದೇಹದ ಕೂಟ। ಮಧುರ ಮಾತಿಲಿ ದಣಿಸುವ । ರಂಗನು ॥ ತನುಮನ ತನ್ನಧೀನದಲ್ಲಿ ದೇವ ಮುನಿವಂದ್ಯ ತಾನೆ ಬಲ್ಲ। ವನಜಾಕ್ಷ ವಾಸುದೇವನ ತಂದು ತೋರಿಯವನ ಕೂಡಿಸಯ್ಯ ನೀನೆ ಉದ್ಧವಾ ॥ ೨ ॥ ಕರುಣಾಬ್ಧಿಯೆಂಬರಾ ಕಪಟ ನಾಟಕದವಾ। ಸರಸ ವಿರಸ ಮಾಡಿದ। ಸ್ಮರಿಸಿದವರ ಕಾಯ್ವ ಬಿರಿದುಳ್ಳ ಶಿರಿ ಕೃಷ್ಣ । ಮರತನೇತಕೆ ರಂಗನೂ ॥ ವರ ವಾಸುದೇವನ ಪದ ಭಕುತಿಯೆ ಸಾಕು । ಸುರವಂದ್ಯ ತಾನೆ ಬಲ್ಲ । ನೆರೆನಂಬಿದರನ್ನೇರ ಮರತನೇ ಮುದ್ದು ರಂಗಗೆ ನೆನಹೆ ಇಲ್ಲ ॥ ೩ ॥ ಶ್ರೀಃ ॥

## ೨೭. ರಾಗ ಸೌರಾಷ್ಟ್ರ, ತ್ರಿಪುಟತಾಳ.

ಛೀಛೀ ಮನವೆ । ನಾಚದ ತನುವೆ ॥ ಪಲ್ಲ ॥ ನೀಚವೃತ್ತಿಯ ಬಿಟ್ಟು ನೆನೆಯೊ ಶ್ರೀಹರಿಯ ॥ ಅನುಪಲ್ಲ ॥ ಕಿವಿಗೊಟ್ಟು ಘಂಟಾನಾದಕ್ಕೆ ಹುಲ್ಲೆಯು ನಿವಹ । ಬಲೆಗೆ ಸಿಲುಕಿದನರಿಯಾ ॥ ನವ ಯೌವನೆಯರ ಕೋಕಿಲಾಲಾಪದ । ಸವಿಗೆಳಸದೆ ಅಚ್ಯುತನ ಕಥೆಯು ಕೇಳಾ ॥ ೧ ॥ ಹಣ್ಣೆಂದು ಭ್ರಮಿಸಿ ಪತಂಗ ದೀಪದಿ ಬಿದ್ದು । ಉಣ್ಣದುರಿವುದ ಕಂಡು ಕಂಡರಿಯಾ ॥ ಬಣ್ಣದ ಬಾಲೆಯರ ರೂಪಿಗೆ ಮರುಳಾಗಿ । ಮಣ್ಣ ತಿನ್ನದೆ ಮಾಧವನನ್ನು ಸ್ಮರಿಸಾ ॥ ೨ ॥ ಗಾಣದ ತುದಿಯ ಮಾಂಸವ ಮತ್ಸ್ಯ । ಪ್ರಾಣಬಿಡುವ ಅಂಗನೆಯರಧರವ ॥ ಮಾಣದೆ ಬಯಸಿ ಕೂಡುವಂತೆ ಕೆಡದೆ ಶ್ರೀ । ಮನ್ನಾರಾಯಣ ನಾಮಾಮೃತ ಉಂಡು ಸುಖಿಸೋ ॥ ೩ ॥ ಆಳಿಯ ದುಃಖರಿಯಾ ಕರಿಯು ಸ್ಪರ್ಶನಕಾಗಿ । ಗುಳಿಯು ಬಿಟ್ಟುದ ನೀ ಕಂಡು ಕಂಡರಿಯಾ ॥ ಲಲನೆಯಾಲಿಂಗನ ಕೆಳಸದೆ ಶ್ರೀ । ಲಲನೇಶನಂಘ್ರಿಯನಪ್ಪಿಕೊ ಮನವೇ ॥ ೪ ॥ ಅಳಿಪರಿಮಳಕಾಗಿ ನಳಿನದೊಳಗೆ ಸಿಲುಕಿ । ಉಳುವಂಗನೇರ ಸಂಗವ ಬಯಸಿ ॥ ಅಲಸದೆ ವರದ ಶ್ರೀಕೃಷ್ಣನಂಘ್ರಿಯೊಳಿಪ್ಪ । ತುಳಸಿಯ ನಾಘ್ರಾಣಿಸು ಕಂಡ್ಯ ಮನವೇ ॥ ೫ ॥ ಶ್ರೀಃ ॥

## ೨೮. ರಾಗ ಕೇದಾಗೌಳ, ಅಟತಾಳ.

ಸಂಸಾರವೆಂಬ ಮಾರಿಗೆ ಸಿಲುಕಿದೆ ॥ ಪಲ್ಲ ॥ ಕಂಸಾರಿ ಕರುಣದಿಂದೆನ್ನ ನೋಡಯ್ಯ ॥ ಅನುಪಲ್ಲ ॥ ಬಲಿಗಾಯುತವಾದ ಕುರಿ ಮೆಲುವಂತೆ ಹಡೆ । ತಲೆ ಮೃತ್ಯುವನರಿಯದೆ ಮತ್ತನಾಗಿಪ್ಪೆ ॥ ೧ ॥ ಕಂಡು ಕಂಡು ಪತಂಗವು ಕಿಚ್ಚಿನೊಳು ಬೀಳುವಂತೆ ॥ ಕಂಡಕಂಡ ಹೇಯ ವಿಷಯಂಗಳಿಗೆರಗುವೆನಯ್ಯ ॥ ೨ ॥ ಪತಿಯಿರಲು ಸತಿಗನ್ಯಾದರಿಸುವಂತೆ ಕಂಡ ಕಂಡ ॥ ಗತಿನೀನಿರಲು ಅನ್ಯವೆ ಗತಿಯೆಂಬೆನೆಯ್ಯ ॥ ೩ ॥ ಒಂದು ಮೊಲಕೆ ಆರು ಹುಲಿ ಬಂದೆಡರುವಂತೆ ॥ ಬಂದೆಳವುತಲಿದೆ ಅರಿಷಡು ವರ್ಗವು ॥ ೪ ॥ ಜಲಕ್ಕಾಗಿ ಕೋಡಗ ಪಾಟುಬಡುವಂತೆ ।

ಭೂಲೋಗರಿಗಾಗಿ ನಾ ತೊಳಲಿ ಬಳಲುವೆ ॥ ೫ ॥ ಶುಕನ ಓದುಗಳಂತೆ ಯೆನ್ನ ಓದುಗಳಯ್ಯ ॥ ಅಕಟಕಟವೆನಗೆ ಬಂಧವಾಯಿತು ನೋಡೊ ॥ ॥ ೬ ॥ ಮಿಂದು ನಿಂದಾನೆ ಹುಡಿಯ ಹೊಯ್ದುಕೊಂಬುವಂತೆ ॥ ಮಂದ ಮತಿಯಾದೆನೆಯ್ಯ ತಂದೆ ಕರುಣಿಸೊ ಕೃಷ್ಣ ॥ ೭ ॥ ಶ್ರೀಃ ॥

## ೨೯. ರಾಗ ಸೌರಾಷ್ಟ್ರ, ಅಟತಾಳ.

ಲಾಭಸಾಲದೆ । ಇಂಥ । ಲಾಭಸಾಲದೆ ॥ ಪಲ್ಲ ॥ ಲಾಭವಿದೆ ಮಿಕ್ಕದೊಂದು ಲಾಭವು ಲೆಖ್ಖವು ಹೇಳಾ ॥ ಅನುಪಲ್ಲ ॥ ನರಹರಿದಾಸರ ಚರಣ ಸೇವೆಯು ಎಂಬ । ಹರಿಚಂದನಕೆ ಸಾಕಿದ ಮಾರನಂತಿಪ್ಪದೊಂದು ॥ ೧ ॥ ಹರಿಚರಿತಾಮೃತ ಸವಿಗೆ ಕಿವಿ ಮೆಚ್ಚಿ ॥ ಪರಿಮಳಕೆರಗುವ ಮರಿದುಂಬಿಯಂತಿಪ್ಪ ॥ ೨ ॥ ಜಲಜನಾಭನ ಚೆಲುವಿನ ಜಲನಿಧಿ ॥ ಯೊಳಗೆ ಎನ್ನ ಕಂಗಳು ಮೀನಂತೆ ಲೋಲಾಡುವ ॥ ೩ ॥ ನಳಿನಾಕ್ಷನ ಮೂರ್ತಿಗೆ ಮನಮೆಚ್ಚಿ ಮರಿಯದೆ । ಎಳೆಗರು ತನ್ನ ತಾಯ ಹಲುಬುವ ಪರಿಯಿಪ್ಪ ॥ ೪ ॥ ಶ್ರೀಕೃಷ್ಣಭಕುತಿ ಸುಧೆಸವಿಗೆ ಮುಕ್ತಿಯು । ಸರಿಯಲ್ಲ ಸಾರವೆಂದು ಹರಿಗೆ ಮರುಳಾಗಿಪ್ಪ ॥ ೫ ॥

## ೩೦. ರಾಗ ಆನಂದಭೈರವಿ, ಆದಿತಾಳ.

ಇದಿರ್ಯಾರೊ । ಗುರುವೆ । ನಿಮಗೆ ಸಮರ್ಯಾರೊ ॥ ಪಲ್ಲ ॥ ಮದನ ಗೋಪಾಲನ ಪ್ರಿಯ ಜಯರಾಯಾ ॥ ಅನುಪಲ್ಲ ॥ ವ್ಯಾಸಮಂತ್ರಗಳೆಂಬ ಮಂದರವನು ವೇದ । ರಾಸಿಗಳೆಂಬ ಕ್ಷೀರವಾರಿಧಿಯೊಳಿಟ್ಟು ॥ ಶ್ರೀಸರ್ವಜ್ಞರ ವಾಕ್ಯಪಾಶದಿ ಕಟ್ಟಿ । ಭಾಸುರ ನ್ಯಾಯ ಸುಧಪಡದ್ಯೋಯತೀಂದ್ರ ॥ ೧ ॥ ಕುಟಿಲ ಮತಗಳೆಂಬೊ ಪಟು ಅಂಧಕಾರಕ್ಕೆ । ಪಟುತರತತ್ವ ಪ್ರಕಾಶಿಕೆಯೆಂಬ ॥ ಚಟುಲಾತಪದಿಂದ ಖಂಡಿಸಿ ತೇಜೋ । ತ್ಕಟದಿ ಮೆರೆದ ಬುಧಕಟಕಾಬ್ಜ ಮಿತ್ರ ॥ ೨ ॥ ವೇದಶಾಸ್ತ್ರಗಳೆಂಬ ಶೃಂಗಗಳಿಂದ । ಸು । ಧಾದಿ ಗ್ರಂಥಗಳೆಂಬ ಸ್ತನಗಳಿಂದೊಪ್ಪುವ ತತ್ವ ॥ ಬೋಧಿನಿಯೆಂಬ ದುಗ್ಧಶಿಷ್ಯವತ್ಸಗಳಿಗೆ । ಆದರದಿಂದ ಇತ್ತ ಯತಿ

ಸುರಧೇನು ॥ ೩ ॥ ವನಜನಾಭನ ಗುಣಗಳು ಸರ್ವಜ್ಞ । ಮುನಿಕೃತ ಗ್ರಂಥ ಅವನಿಯೊಳಡಗಿರೆ॥ ಸ। ಜ್ಜನರಿಗೆ ಟೀಕಾಜನರಿಂದ ತೋರಿಸಿ। ಘನ ಸುಖ ಸಾಧನ ಮಾಡಿದ ಧೀರಾ ॥ ೪ ॥ ಕಡು ಗರ್ಜಿಸುವ ಕೇಸರಿಯಂತೆ ವಿಮೃ ವಾದ । ಗಡಣೆಯ ಕೇಳುತ ನುಡಿಯೊಂದಾಡಲು ॥ ಗಡಗಡ ನಡು ಗುವ ಮಾಯಿಗೋಮಾಯುಗಳು । ಅಡವಿಯೊಳಡಗಿರೆ ನಿನ್ನ ಭೀತಿ ಯಲಿ ॥ ೫ ॥ ಅಮಿತ ದ್ವಿಜಾವಳಿ ಕುಮುದಗಳರಳಿಸಿ । ವಿಮತರ ಮುಖ ಕಮಲಂಗಳ ಬಾಡಿಸಿ ॥ ಸ್ವಮತರ ಹೃತ್ಸಂತಾಪಗಳೋಡಿಸಿ । ವಿಮಲ ಸುಕೀರ್ತಿಯ ಪಡದಿಯೋ ಚಂದ್ರಾ ॥ ೬ ॥ ಅರ್ಥಿಮಂದಾರ ವೇದಾರ್ಥ ವಿಚಾರ ಸ । ಮರ್ಥ ಶ್ರೀಕೃಷ್ಣ ಪಾದಾಂಬುಜಲೋಲ ॥ ಪ್ರತ್ಯ ರ್ಥಿಮತ್ತೇಭ ಕಂಠೀರವಾಕ್ಷೋಭ್ಯ । ತೀರ್ಥಕರಜ ಜಯತೀರ್ಥಯ ತೀಂದ್ರ ॥ ೭ ॥ ಶ್ರೀಃ ॥

## ॥ ಶ್ರೀಮಧ್ವೇಶಾರ್ಪಣಮಸ್ತು ॥

### ೩೧. ರಾಗ ಕಾಂಬೋದಿ, ಅಟತಾಳ.

ಏನೆಂಬೆ ನಿನ್ನ ಕರುಣಪಡೆವ ಪರಿಯಾ ॥ ಪಲ್ಲ ॥ ಶ್ರೀಮ । ದಾನಂದ ತೀರ್ಥಾರ್ಯ ಹರಿಕಾರ್ಯ ಧುರ್ಯ ॥ ಅನುಪಲ್ಲ ॥ ವಾರಿಧಿಯ ಗೋಷ್ಪಾದ ನೀರಂತೆ ದಾಟೆ ಅಂದು । ಮಾರುಮಲತಾಕ್ಷನ ಮುರಿದು ಮೆರದೆ ॥ ಸಾರಿ ಬಹ ರಕ್ಕಸರ ಗೆಲಿದು ನೀ ನಿಂದು । ಮೇರೆಯಿಲ್ಲದೆ ಭವಾಂಬುಧಿಯ ದಾಟಿಸಿದೆ ॥ ೧ ॥ ದಾನವನ ಅಶೋಕವನವ ಕಿತ್ತಾಡಿ । ಶ್ರೀನಾಥನೆನುತ ಲಂಕೆಯನುರುಪಿದೆ ॥ ದಾನವರಶೋಕವನಗಳ ಬೇರ ಕಿತ್ತುತಂದು । ದಾನವಾರಿಯ ಪುರವ ಪೂರೈಸಿದೆ ॥ ೨ ॥ ಬೇಗ ಸಂಜೀ ವನವ ತಂದು ನೀ ಹೊರಟೆ । ನಾಗಪಾಶದಿ ನೊಂದ ಕಪಿಕಟಕವ ॥ ಈಗ ಶ್ರೀಹರಿ ಭಕುತಿ ಸುಧೆಯನೆರೆದು ಸಲಹಿದೆ । ರಾಗದಿಂ ಭವಪಾಶ ಬದ್ಧಜನರುಗಳ ॥ ೩ ॥ ಮೂಲ ರಾಮಾಯಣವ ಪಾಡಿಪಾಡಿ ಅಂದು । ಓಲಾಡಿ ಹರಿಭಕ್ತಿ ಸಾಗರದೊಳು ॥ ಈ ಲೋಕದೊಳಗೆಲ್ಲ ಅದರ ಸಾರವ ಬೀರಿ । ತೇಲಿಸಿದೆ ಭವಾಬ್ಧಿ ಮಗ್ನಜನರುಗಳ ॥ ೪ ॥ ಹತ್ತು

ದಿಕ್ಕನು ಗೆಲಿದು ರಾಜಸೂಯದಿ ಹರಿಯ । ಚಿತ್ತ ಬರಲಗ್ರಪೂಜೆಯ ಮಾಡಿದ ॥ ಹತ್ತಿರತು ಮತ್ತೊಂದು ದುರ್ಭಾಷ್ಯಗಳ ಜರಿದು । ವಿಸ್ತರಿಸಿದ್ಯೊ ಭಾಷ್ಯದಗ್ರಪೂಜೆಯನೂ ॥ ೫ ॥ ದ್ರೌಪದಿಯ ಸಂತವಿಟ್ಟೆನೆಂದು ಮುಡಿಪಿಡಿದ । ಪಾಪಿ ದುಶ್ಶಾಸನನ ಬಸುರ ಬಗೆದೆ ॥ ಪಾಪಿ ಜನರೆಳದೊಯ್ಯೆ ವೇದಾಂತ ದೇವಿಯರ । ಶ್ರೀಪತಿಯ ಸೇರಿಸಿದ ಭಾವವರಿತೆಂದೂ ॥ ೬ ॥ ಅಂದು ಕಲಿಯಂಶ ದುರ್ಯೋಧನನ ಸಂದುಗಳ । ಕುಂದದೆ ಮುರಿದೆ ಗದೆಯಿಂದ ನೀನು ॥ ಇಂದು ಕಲಿಯನೇಕಶಾಸ್ತ್ರಶಸ್ತ್ರಗಳಿಂದ । ಕೊಂದೆಳದೆ ಹರಿಯ ಮಂಡಲದೊಳು ನೀನು ॥ ೭ ॥ ಶ್ರುತಿಪಂಕಜಗಳರಳೆ ಅಜ್ಞಾನ ತತಿಯೋಡೆ । ಗತಿಯಡಗೆ ಮಿಥ್ಯಾವಾದಿ ಚೋರರ॥ ಕು । ಮತಗಳು ಮುರಿಯೆ ಸನ್ಮಾರ್ಗ ಕಾಣಿಸಲು । ವಿತತವಾಯಿತು ನಿನ್ನ ಪ್ರಭೆಸೂರ್ಯನಂತೆ ॥ ೮ ॥ ಜ್ಞಾನಚಂದ್ರಿಕೆ ಹೊಳೆಯೆ ಭಕ್ತವಾರಿಧಿಯುಕ್ಕೆ । ದಾನಚಕೋರನಲಿಯೆ ವಿಷ್ಣುಮಾರ್ಗ ದೊರಿಯೆ ॥ ಮಾನವರ ಭಯವೋಡೆ ತಾಪತ್ರಯಗಳಡಗೆ । ನೀನುದಿಸಿದೆ ತೀರ್ಥೇಂದು ಕೃಷ್ಣನೊಪ್ಪೆ ॥ ೯ ॥ ಶ್ರೀಃ ॥

## ೩೨. ರಾಗ ಕೇದಾರಗೌಳ, ಅಟತಾಳ.

ಎಂದೆಂದೆನ್ನ ಮನದಿಂದ ಅಗಲದಿರೊ ॥ ಪಲ್ಲ ॥ ನಂದನಂದನನೆ ಆನಂದ ಮೂರುತಿಯೆ ॥ ಅನುಪಲ್ಲ ॥ ಬಹುಕಾಲ ನಿನ್ನ ಶ್ರವಣವೆಂಬ ಪೊನ್ನೋರೆಯ । ಬಹುಮಾನದಿಂದ ಯೆನ್ನ ಕಿವಿಯಲಿಟ್ಟು ॥ ಮಹಿತ ಮಂಗಳ ಸೂತ್ರವೆಂಬ ದಾಸ್ಯವನಿತ್ತು । ಮಹದಾನಂದದಲಿ ಯೆನಗೆ ಕಟ್ಟಿದ್ಯಾಗಿ ॥ ೧ ॥ ಸುಲಲಿತ ಸೌವರಣ ವೊದಲಾದ ಭೂಷಣವಿತ್ತು । ಬೆಳಸಿದೆ ಬನವಾಸಖೇದದಿಂದ ನೀನು ॥ ಬೆಲೆಯಿಲ್ಲದ ಸುಜ್ಞಾನವೆಂಬಾ ನಿಧಿಯೊಳಿಟ್ಟು । ಜಲಜಾಕ್ಷ ಒಲಿಸೆನ್ನ ಸೆರಗಪಿಡಿದೆಳೆದೆಯಾಗಿ ॥ ೨ ॥ ಎಲ್ಲಿ ನೀನೆಲಸಿದಲ್ಲೆನಗೇನು ಇನಿತಿಲ್ಲ । ಬಲ್ಲೆ ನೀ ವಿಶ್ವವ್ಯಾಪಕನೆಂಬುದನೂ ॥ ಸಲ್ಲದು ಮುನಿಸೆನ್ನೊಳು ಕೃಷ್ಣ ನಿನಗೆ ಇಂ । ತಲ್ಲದಿದ್ದರೆ ಕರ ಹಿಡಿದೆಳೆದೆಯಾಗಿ ॥ ೩ ॥ ಶ್ರೀಃ ॥

## ೩೩. ರಾಗ ರೇಗುಪ್ತಿ, ಅಟತಾಳ.

ಕಾಣದೆ ನಿಲ್ಲಲಾರೆ। ಕಮನೀಯ ಮೂರುತಿಯ । ಪ್ರಾಣೇಶನನು ತೋರೆ ಗಿಣಿಯೆ ॥ ಪಲ್ಲ ॥ ಮಾಣಿಕ್ಯ ಪದಕವನು । ಮನ್ನಿಸೆ ನಿನಗೀವೆ । ಜಾಣ ಕೃಷ್ಣನ ತೋರೆ ಗಿಣಿಯೆ ॥ ಅನುಪಲ್ಲ ॥ ಮಕರ ಕುಂಡಲ ಧರನ । ಮಕರ ಧ್ವಜ ಪಿತನ । ಮಕುಟ ಭೂಷಣನ ತೋರೆ ಗಿಣಿಯೆ ॥ ಮಕ ರಾಕ್ಷ ಸಂಹರನ । ಮಕರಾರಿ ರಕ್ಷಕನ । ಮಕರಿ ಶಿಕ್ಷಕನ ತೋರೆ ಗಿಣಿಯೆ ॥ ೧ ॥ ಇಂದುಕುಲ ಪಾವನನ । ಇಂದುರವಿ ಲೋಚನನ । ಇಂದು ನೀ ಕರತಾರೆ ಗಿಣಿಯೆ ॥ ಇಂದು ಶೇಖರಸುತನ । ಇಂದಿರಾ ರಮಣನ । ತಂದು ತೋರೆ ಮುದ್ದು ಗಿಣಿಯೆ ॥ ೨ ॥ ಒಂದು ನಿಮಿಷವು ಒಂದು । ಯುಗವಾಗಿ ತೋರುತಿದೆ । ಸೌಂದರ್ಯವತಿ ತೋರೆ ಗಿಣಿಯೆ ॥ ಮಂದಮಾರುತ ಸೋಕೆ । ಮರುಳು ಗೊಂಡೆನೆ ಯೆನ್ನ । ಮಂದಿರಕ್ಕೆ ಕರತಾರೆ ಗಿಣಿಯೆ ॥ ೩ ॥ ಕಾಯಜನ ಬಾಣದಲಿ । ಕಾಯವೆಲ್ಲವು ಬಹು । ಘಾಯವಾದವು ನೋಡು ಗಿಣಿಯೆ ॥ ಮಾಯೆ ಗಳ ಮಾಡದೆ । ಮಮತೆಯಿಂದಲಿ ಯೆನ್ನ । ನಾಯಕನ ಕರತಾರೆ ಗಿಣಿಯೇ ॥ ೪ ॥ ಪಂಕಜೋದ್ಭವ ಪಿತನ । ಪಂಕಜ ಲೋಚನನ । ಪಂಕಜನಾಭನ ತೋರೆ ಗಿಣಿಯೆ ॥ ಪಂಕಜೋದ್ಭವ ಶಿರಿ । ಕೃಷ್ಣನ ಪಾದ ದೊರಕಿತು । ಶಂಕೆಯಿಲ್ಲದೆ ತೋರೆ ಗಿಣಿಯೆ ॥ ೫ ॥ ಶ್ರೀಃ ॥

## ೩೪. ರಾಗ ಕೇದಾರಗೌಳ, ಅಟತಾಳ.

ಹಲವು ಪರಿಯಲಿ ಶ್ರೀಹರಿಯ ಸೇವಿಸುವ ಗೋ । ಕುಲದ ತರುಣಿ ಯರ ಪುಣ್ಯವಿನ್ನೆಂತೊ ॥ ಪಲ್ಲ ॥ ಮಲಿನವಳಿದು ಜಲವೆರೆದು ಗಂಧವ ಪೂಸಿ । ಕೆಳಗೆ ಕರ್ಪೂರ ತುಂಬಿ ಕಸ್ತೂರಿಯ ॥ ಅಲತಿಗಸಾಧ್ಯ ಕೆಂಪುಳ್ಳ ಅಂಗಕ್ಕೆ ದೇವ । ಮಲಗುವ ಮನೆಯೆಂದು ಹಿತದಿ ಶೃಂಗರಿಪದು ॥ ೧ ॥ ಜ್ಯಾಮುಡಿ ಚಾಮರ ಸುವಸನ ಮೇಲ್ಕಟ್ಟು । ಹಾರವೆ ಕನ್ನಡಿ ಸಾಲು ಗಳು ॥ ಊರು ಬಾಳೆಯ ಕಂಬ ಶಿರಗ ಪತಾಕೆಯು । ಮಾರಿದನಿಲಗಳೆ ಕುರುಜುಗಳಂತಿರೆ ॥ ೨ ॥ ಕರಪಲ್ಲವ ನರಬೀಗು ಸುಮಗಳಾಗೆ ಬೆ ।

ಮರು ಮರಂದ ಜಾಲದಂತಿರೆ ॥ ವರಬಾಹುಲತೆಯಲಿ ರಾಮಚಂದ್ರ । ವರಿವಾ ಸಿಲುಕಿ ನೀ ಬಿಂಬಾಧರ ಧರಾವೆನುತ ॥ ೩ ॥ ಅತಿಅತಿ ಮೃದುವಾದ ತನುವೆನ್ನ ಸುಪ್ಪತ್ತಿಗೆ ಉ । ನ್ನತವಾದ ಭುಜವೆರಡು ವೊರಗೂ ॥ ಹಿತವಾದ ಕುಚಯುಗ ಬಟ್ಟಿತಿಮಿಗಳೂ ಅ । ಚ್ಯುತಗೆ ತವ್ಮೊಡಲೆ ಶಯ್ಯಾದಂತೊಪ್ಪಿರೆ ॥ ೪ ॥ ಮೊಗವೆಂತೊ ತಿಂಗಳ ತಳಿಗೆ ಯೊಳಗೆ ನಯ । ನಗಳೆಂಬೊ ಬಟ್ಟುವಾರತಿ ನೇಹದಿ ॥ ಸೊಗಸುವ ಕಂಗಳ ಪ್ರಭೆ ದೀಪವೆನಲು । ಖಗವಾಹನ ಕೃಷ್ಣಗೆ ಚಂಚಲನೋ ಟವಾರತಿಯೆತ್ತಿ ॥ ೫ ॥ ಶ್ರೀಃ ॥

೩೫. ರಾಗ ಮುಖಾರಿ, ಆದಿತಾಳ.

ಕೃಷ್ಣ ಕೃಷ್ಣ ಕೃಷ್ಣಯೆಂದು ಮೂರುಭಾರಿ ನೆನೆಯಿರೋ ಸಂ । ತುಷ್ಟ ನಾಗಿ ಮುಕುತಿಕೊಟ್ಟು ಪಾತಕ ಭರವಾ ಪೊರಿವಾ ॥ ಪಲ್ಲ ॥ ಕಮಲ ನಾಭನ ಚಿಹ್ನೆಯನ್ನು ಧರಿಸಿಕೊಂಡು ಮೆರಿಯಿರೊ ॥ ಯಮನ ಭಟರು ಕಂಡು ಅಂಜಿ ಅಡವಿಗೆವೋಡುವರೋ ॥ ೧ ॥ ಸಕಲವೇದಶಾಸ್ತ್ರ ಪಠಿಸಿ ಸಾರವನ್ನು ತಿಳಿವರೇನು ॥ ಮಕರಕುಂಡಲಧರನ ನಾಮಕೆ ಮತ್ತೆ ಸರಿ ಯಿಲ್ಲವೊ ॥ ೨ ॥ ಜನ್ಮಮುಕ್ತಿ ಮಧ್ವಮತವ ಅನ್ನುಸರಿಸಿ ನಡೆಯಿರೊ ॥ ಒಮ್ಮನದಿ ಸಿರಿಕೃಷ್ಣ ತನ್ನ ಲೋಕವ ಕೊಡುವನು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೩೬. ರಾಗ ಶಂಕರಾಭರಣ, ಆದಿತಾಳ.

ವೃಂದಾವನವಿ ನೋಡುವ ಬಾರೆ । ಗೋ । ವಿಂದನಾಡುವ ಸಂದಣಿ ಸಾಲದೆ ಸಖಿ ॥ ಪಲ್ಲ ॥ ಮುನಿಗಳ ತರು ಪಕ್ಷಿ ಮೃಗಂಗಳಾಗಿರೆ । ಸನ ಕಾದಿಗಳು ಗೋವುಗಳಾಗಿರೆ ॥ ಅನಿಮಿಷರೆಲ್ಲರು ಗೋಪಾಲಕರಾಗಿ । ದನುಜಾಂತಕನು ಮನುಜನಂತಾಗಿರೆ ॥ ೧ ॥ ತಳಿತ ತೋರಣದಿಂ ತಂಪಿನ ನೆರಳಿಂ । ಮಳೆಯಾಗಿ ಸುರಿವ ಮಕರಂದ ಜಲದಿಂ ॥ ಫಲ

ಪುಂಜಗಳಿಂ ಶುಕ ಚಾಟುಗಳಿಂ । ನಳಿನನಾಭನನುಪಚರಿಪ ತರುಗಳೆಲ್ಲ ॥ ೨ ॥ ತಳಿತಿರುವ ಸಲೆ ತವುತವು ಜಾತಿಯು । ಉಳಿದಾ ನಲಿದು ಕಣ್ಣುಮುಚ್ಚಿ ತೆರೆಯುತ್ತ ॥ ನಳಿನನಾಭನ ವೇಣುನಾದಕೆ । ಮುಳುಗಿ ಮುನಿಗಳಂತಿಪ್ಪಪಕ್ಷಿ ಜಾತಿಗಳೆಲ್ಲ ॥ ೩ ॥ ಚಿತ್ತಜನೈಯನ ವೇಣುನಾದಕೆ । ಎತ್ತಿದ ಕಿವಿಯಿಂದ ಸವಿಯುತಲಿ ॥ ಮತ್ತಾದ ಸುಖಜಲ ಕಡಲಾಗಿ ಹರಿಯಲ್ಲಿ । ಚಿತ್ರದಂತಿಪ್ಪವು ತುರುವಿಂಡುಗಳೆಲ್ಲ ॥ ೪ ॥ ರಂಗಪಾದನಖಂಗಳ ಬೆಳಕಿಗೆ । ತುಂಗ ಚಂದ್ರಕಾಂತಶಿಲೆ ಒಸರೆ ಸಲೆ ॥ ಹಿಂಗದೆ ಹರಿದು ಕಾಳಿಂದಿಯ ಕೂಡಲು । ಗಂಗೆ ಯಮುನೆಯ ಸಂಗವಂತಿರೆ ॥ ೫ ॥ ಸರಸಿಜನಾಭನ ನಗೆಮುಖ ಚೆಂದುಟಿ । ವರ ಕೌಸ್ತುಭವೆಂಬೊ ಬಾಲರವಿಯೂ ॥ ಎರಡು ಕಣ್ಣು ಚಕೋರಚಕ್ರವಾಕ । ಇರುಳು ಹಗಲುಯೆಂದು ಹೋರ್ಯಾಡುತಿಪ್ಪವು ॥ ೬ ॥ ಹರಿಯ ಕೊಳಲಧ್ವನಿ ಅತಿಮೋಹನಕರ । ತರು ಮೊಗೆಗಳು ಉಲುಕಿದವಾಗಾ ॥ ನಿರಜರ ದಿವ್ಯ ಕರಸಕರದಿಂ । ತೊರೆಗಳ ಸಲಹಿದ ನೆಪದಿಂದಾ ನಲಿವ ॥ ೭ ॥ ಅಳಿಗಳು ಗಾನದಿಂದೊಲಿದೊಲಿದಾಡುವ । ಹಲವು ವನದ ದೇವತೆಗಳೆಲ್ಲ ॥ ಹೊಳೆವ ಕುಂಡಲರವಿ ತಾಳ ಮೇಳಕೆ । ನಲಿನಲಿದಾಡುವ ವನನೀರುಗಳೆಲ್ಲ ॥ ೮ ॥ ನಳಿನಳಿಸುವ ವನಮಾಲೆಯ ಬಾಷ್ಪ । ಪೊಳೆವ ಪೊಂಬಟ್ಟೆ ಮಿಂಚು ವೇಣುನಾದಾ ॥ ಎಳೆಯ ಗರ್ಜಿತ ಮೇಘಶ್ಯಾಮನಾದ ಕೃಷ್ಣ । ಮಳೆಮೇಘವೆಂದು ಚಾತಕ ನಲಿಯಲೂ ॥ ೯ ॥ ಶ್ರೀಃ ॥

## ೩೭. ರಾಗ ಜುಂಜೋಟಿ, ಆದಿತಾಳ.

ಬಾರೋ ಸೇರೋ ಯೆಲೊ ಜೀವ । ಮಾರನೈಯನ ಬಿಡದೆ ನೀನು ॥ ॥ ಪಲ್ಲ ॥ ಘೋರವಾದ ಸಂಸಾರಕಿನ್ನು ತಾರಕ ಕಮಲಾ ದೇವನು ॥ ॥ ಅನುಪಲ್ಲ ॥ ಸುಲಭರಿಗೆ ಸುಲಭನಿವನೂ । ನಳಿನನಾಭನು ತ್ರಿಜಗದೊಳಗೆ ॥ ಎಳೆಯ ತುಲಸಿ ದಳಗಳನು ನಲಿಯುತಲರ್ಚಿಸಿ । ಒಲುಮೆಯಿಂದ ಮುಕ್ತಿಯನ್ನು ॥ ಒಲಿದು ಕೊಡುವ ದೇವನಿವನು । ಬಲಿಯ

ಸಲಹಿವಂತೆ ಭಕ್ತರ ಸಲಹುವನು ಕಾಣಿರೋ ॥ ೧ ॥ ಕಮಲನಾಭನ ಪಾದಕಮಲಗಳನು ಭಕ್ತಿಯಿಂದ । ಕಮಲಗಳನು ತಂದು ಕರಕಮಲದಲರ್ಚಿಸುವೆ ॥ ಕಮಲಪತಿಯು ತನ್ನ ಹೃತ್ಕಮಲದೊಳಗೆ ಇಟ್ಟುಕೊಂಡು । ಕಮಲಜೆಯನ್ನು ಮುದದಿ ಕಮಲಾಕ್ಷಿಯನ್ನು ಸೇರನೇ ॥ ೨ ॥ ತೊಡೆಯನೇರ ಬಂದ ಮಗನ । ಮಡದಿ ದುಷ್ಟಮಾತ ಕೇಳಿ ॥ ಕಡೆಗೆ ನೂಕಿ ತಂದೆ ತನ್ನ । ಪಡದ ತಾಯಿ ಹೇಳಲು ಯೆ ॥ ನ್ನೊಡೆಯ ಪಾಲ್ಗಡಲಿನಲ್ಲಿಹನು । ತಡವು ಮಾಡದೆ ಪೂಜಿಸುಯೆನಲು ॥ ದೃಢ ಭಕುತಿಯಿಂದ ಧ್ರುವನು ಪೂಜಿಸೆ । ಪಡೆದುದಿಲ್ಲವೆ ರಾಜ್ಯವಾ ॥ ೩ ॥ ಕರಿ ಮಕರಿಗೆ ಸಿಲುಕಿ । ಸಲಹುವರ ಕಾಣೆನೆಂದು ಪುರಿ ॥ ಅರಸು ಕಾಯೊ ಯೆನ್ನ । ಕರುಣದಿಂ ಮೊರೆಯಿಡೆ ॥ ಉರಗ ಮಂಚದಿಂದ ಧುಮುಕಿ । ಗರುಡವಾಹನನಾಗಿ ಬಂದು । ಭರದಿ ಚಕ್ರವಿತ್ತು ಮಕರಿಯ ನರಿದು ಕರಿಯ ಕಾಯ್ದನೆ ॥ ೪ ॥ ದುಷ್ಟ ದುರ್ಯೋಧನನ್ನ ಸೃಷ್ಟಿ ಪಾಂಡವರು ತನ್ನ ॥ ಕಷ್ಟಪಡಿಸೆ ಮನದಲೊಮ್ಮೆ । ವಿಷ್ಣು ಸಲಹೊಯೆನಲು । ನಷ್ಟವಾದ ಕುರುಕುಲವನ್ನು । ಕುಟ್ಟಿಬಿಸುಟು ಬೇಗದಿಂದ ಉ । ತ್ಕೃಷ್ಟ ಮನ್ನಾರು ಕೃಷ್ಣನು ಅವನಿಗೆ ಪಟ್ಟಗಟ್ಟಿದಿಲ್ಲವೆ ॥ ೫ ॥

## ೩೮. ರಾಗ ಕಾಂಬೋದಿ, ಅಟತಾಳ.

ಹರಿದಿನ ಪಾತಕ ಪರಿಹರ ॥ ಪಲ್ಲ ॥ ದುರಿತಾರಿ ಕರುಣಕ್ಕೆ ಕಾರಣ ಮನುಜಾ ॥ ಅನುಪಲ್ಲ ॥ ಗಂಗೆ ಮೊದಲಾದ ತೀರ್ಥಂಗಳೆಣೆಯೆ । ಶ್ರೀ । ರಂಗ ಮೊದಲಾದ ಕ್ಷೇತ್ರವು ಸರಿಯೆ ಉ ॥ ತ್ತುಂಗ ಜಪತಪ ಹೋಮಗಳಿದಿರೆ । ಭು । ಜಂಗಶಾಯಿ ದಿನವೊಂದುಪವಾಸಕ್ಕೆ ॥ ೧ ॥ ಹಿಂದೆ ಮಾಡಿದ ಪಾತಕನಾಶವು । ಇಂದು ಮಾಡುವ ಸುಕೃತಕ್ಕೆ ಬೆಳವು ॥ ಮುಂದಣ ಮುಕುತಿಗೆ ಕಲ್ಪಲತೆಯೂ । ಇಂದಿರೇಶನ ದಿನದಿ ಉಪವಾಸವೂ ॥ ೨ ॥ ರುಕುಮಾಂಗದ ಮೊದಲಾದ ಭಕತರೆಲ್ಲ । ಸಕಲವು ಬಿಟ್ಟು ಏಕಾದಶಿಯ ॥ ಭಕುತಿಯಿಂದಲಿ ಮಾಡಿ ಶ್ರೀಕೃಷ್ಣನ ಮೆಚ್ಚಿಸಿ । ಮುಕುತಿಯ ಸೂರೆಗೊಂಡದನರಿಯಾ ॥ ೩ ॥ ಶ್ರೀ॥

೩೯. ರಾಗ ಮುಖಾರಿ, ತ್ರಿಪುಟತಾಳ.

ಆರು ನಿನಗಿದಿರೊ ಅಖಿಳ ಧಾರುಣಿಯೊಳಗೆ ॥ ಪಲ್ಲ ॥ ಪರಮ । ಕಾರುಣಿಕ ಗುರುಮಧ್ವ ಚಾರುಚರಿತಾ ॥ ಅನುಪಲ್ಲ ॥ ಆರೊಂದು ವೈರಿಗಳ ತರಿದು ವೈಷ್ಣವರಿಗೆ । ಆರೆರಡು ಊರ್ಧ್ವಪುಂಡ್ರಗಳನೆ ಇತ್ತ ॥ ಆರು ಮೂರರ ಮೇಲೆ ಮೂರಧಿಕ ಕುಮತಗಳ । ಬೇರರಿಸಿ ಕಿತ್ತೊಮ್ಮೆ ಬಿಸುಟ ಧೀರಾ ॥ ೧ ॥ ಆರು ನಾಲ್ಕು ತತ್ವದ ಅಭಿಮಾನಿಗಳೊಡೆಯ । ಮಾರುತಿಯ ಮೂರನೆಯವತಾರನೆನಿಸಿ ॥ ಆರುಐದರ ಮೇಲೆರಡಧಿಕಾ ಲಕ್ಷಣವುಳ್ಳ । ಮೂರುತಿಯೊಳೊಪ್ಪುತಿಹ ಮುನಿವರೇಣ್ಯ ॥ ೨ ॥ ಆರಾರು ಮೇಲೊಂದು ಅಧಿಕ ಲೇಖದಿ ಗ್ರಂಥ । ಸಾರವನು ರಚಿಸಿ ಸಜ್ಜನರಿಗೊಲಿದೂ ॥ ಪಾರಮಾರ್ಥಿಕ ಭೇದ ಪಂಚಕವ ಸ್ಥಾಪಿಸಿ ಉ । ದಾರ ಶ್ರೀಕೃಷ್ಣನ ದಾಸರೊಳು ಮೆರೆದೆ ॥ ೩ ॥ ಶ್ರೀಃ ॥

೪೦. ರಾಗ ಪಂತುವರಾಳಿ, ಝಂಪೆತಾಳ.

ಲಾಭವಹದು ಹರಿಕಥಾಮೃತ ॥ ಪಲ್ಲ ॥ ಪದುಮ । ನಾಭನ ಪದದ ಪಥದಿ ಹವುದು ಸಜ್ಜನ ಗಣಕೆ ಸತ್ಯ ॥ ಅನುಪಲ್ಲ ॥ ಅರಿಷಡ್ವರ್ಗಂಗಳ ಜರಿದು । ಜರಿದು ತಾಪತ್ರಯುವ ಕಳದು ॥ ಮುರಹರನ ಪದದ ಪಥದಿ । ಇರಿಸು ಸಜ್ಜನ ಗಣಕೆ ಸತ್ಯ ॥ ೧ ॥ ಏಳುದಿನವು ಪರೀಕ್ಷಿತನು । ವೇಳೆಯರಿತು ಹರಿಕಥೆಯ ॥ ಕೇಳಿ ಮುಕ್ತನಾದ ಮೇಲೆ । ಕೇಳದ ಕಥೆಯು ಕೇಳಬೇಕು ॥ ೨ ॥ ಎರಡು ಘಳಿಗೆ ಖಟ್ವಂಗರಾಯು । ಕರಣಪುಟದಿ ಕೃಷ್ಣನ ಕಥೆಯ ॥ ಸ್ಮರಿಸಿ ಮುಕ್ತನಾದ ಮೇಲೆ । ನಿರುತ ಕಥೆಯು ಕೇಳಬೇಕು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೪೧. ರಾಗ ಪಂತುವರಾಳಿ, ಅಟತಾಳ.

ತೊಂಡನ ಕಂಡು ನಾ ಬಿನ್ನೈಸುವೆನು ॥ ಪಲ್ಲ ॥ ವರ । ಪಾಂಡವ ಪ್ರಿಯು ಈತಪ್ಪ ಕಾಯಯ್ಯ ॥ ಅನುಪಲ್ಲ ॥ ಹರಿ ನಿಮ್ಮ ನಾಮವೆಂಬ ಕಾಮ

ಧೇನುವಿಗೆ । ದುರಿತದೊಂಡಿಲಿ ಮೇವುಪಟ್ಟಿರೆ । ಭವಾಂಬುಧಿ ॥ ಅರಸಿ ಕುಡಿವ ನೀರು ಯರದು ಯೆನ್ನಲ್ಲದೆ । ಭರಿತವಾಗದ ಬೇರೆ ಅರಸಲೇತಕೆ ಹರಿಯೆ ॥ ೧ ॥ ಮುನಿಗಳ ಮನದ ಕೊನೆಯಲ್ಲಿ । ಘನ ಭಕ್ತಿಪಾಶದಿ ಸಿಲುಕಲೇಕೆ ॥ ಯೆನಮನ ಚಂಚಲದುಯ್ಯಾಲೆ ಇರಲು । ನಿನ ಮನ ಬಂದಂತೆ ತೂಗಾಡಲಾಗದೆ ಹರಿ ॥ ೨ ॥ ಕರ್ಣದ ರಂಧ್ರವ ಪೊಕ್ಕು ನಿನ್ನ ವರಪಾವನ । ಯೆನ್ನ ಪಾಪದಿ ಕಳವಳಿಸಲೇಕೆ ॥ ಎನ್ನೊಳಹೊರಗೆ ಪಾಪದ ರಾಶಿ ತುಂಬಿರಲು । ನಿನ್ನ ಮನಬಂದಂತೆ ಸೂರೆಗೊಳ್ಳೊ ಕೃಷ್ಣ ॥ ೩ ॥ ಶ್ರೀಃ ॥

## ೪೨. ರಾಗ ಮುಖಾರಿ, ಅಟತಾಳ.

ನಿದ್ರೆಬರುತಿದೆ । ಯೆನಗೆ । ನಿದ್ರೆಬರುತಿದೆ ॥ ಪಲ್ಲ ॥ ನಿದ್ರೆಬರುತದೆನಗೆ ಅನಿ । ರುದ್ಧನ್ನ ಸೇವೆಗೆ ವಿಘ್ನಬಡಿಸುತ ॥ ಅನುಪಲ್ಲ ॥ ಅಸ್ತಮಾನ ಉದಯವಾಗುವ ತನಕ । ಸ್ವಸ್ಥದಿ ಪಗಡೆ ಪಂಥವನಾಡುತ ॥ ವಿಸ್ತಾರದಿಂದಲಿ ಬೇರೆ ಕುಳಿತಾ । ಪುಸ್ತಕ ಬಿಚ್ಚಲು ಮಸ್ತಕ ಬಾಗುತ ॥ ೧ ॥ ಹರಿಕಥಾಶ್ರವಣ ಮಾಡುವೆನೆನುತ । ಪರಮ ಭಕ್ತಿಯಲಿ ಕುಳ್ಳಿರಲು ॥ ಕರಿಗಣ್ಣಿಂದ ನೋಡುತ । ಕೊರಳ ಸ್ಮರಣೆ ತಪ್ಪಿ ಗುರುಗುರುಯೆನುತಲಿ ॥ ॥ ೨ ॥ ಇಲಿಗೆ ಬೆಕ್ಕು ಸಾಧಿಸುವಂದದಿ । ಹಲವು ಪರಿಯಲಿ ನಿದ್ರೆಯು । ಚಲದಿ ವ್ಯಥೆಯಪಡಿಸುತಿದೆ । ಉಳುಹೊ ಶ್ರೀಕೃಷ್ಣ ಯೇಕಾದಶಿ ॥ ೩ ॥

## ೪೩. ರಾಗ ನೀಲಾಂಬರಿ, ಝುಂಪೆತಾಳ.

ಎನ್ನ ಮನ ಕಂಡಕಡೆಗೆ । ಎರಗುತಿದೆ । ನಿನ್ನಲ್ಲಿ ಇರಿಸಿ ಕಾಯೊ ॥ ॥ ಪಲ್ಲ ॥ ಚಕ್ಷುರಿಂದ್ರಿಯಗಳಿಂದ । ಚದುರೆಯರ । ನೀಕ್ಷಿಸಿ ನೊಂದೆನಯ್ಯ ॥ ಶಿಕ್ಷಕನು ನೀನೆ ಯೆನಗೆ ಸಿರಿಮೊಗವ । ಸಾಕ್ಷಾತ್ತುವಾಗಿ ತೋರೊ ॥ ೧ ॥ ಘ್ರಾಣೇಂದ್ರಿಯಗಳಿಂದ । ದುರ್ಗಂಧ । ಘ್ರಾಣಿಸಿ ನೊಂದೆನಯ್ಯ ॥ ಪ್ರಾಣೇಶ ನಿನಗರ್ಪಿತ ನಿರ್ಮಾಲ್ಯವಾ । ಘ್ರಾಣಿಸುವಂತೆ ಮಾಡೊ ॥ ೨ ॥ ರಸನೇಂದ್ರಿಯಗಳಿಂದ । ಪದಾರ್ಥ । ಹಸಿವರಿತು

ಉಂಬುವೆನಯ್ಯ ॥ ವಸುಧೇಶ ನಿನಗರ್ಪಿತ ನೈವೇದ್ಯ । ರಸಸವಿಯು ವಂತೆ ಮಾಡೊ ॥ ೩ ॥ ಶ್ರೋತ್ರೇಂದ್ರಿಯಗಳಿಂದ । ಸತತ ದು । ರ್ವಾರ್ತೆಯ ಕೇಳಿ ನೊಂದೆ ॥ ಕರ್ತನಿಗೆ ಕರ್ತುಸರ್ವತ್ರ ಹರಿ । ಕಥೆಯು ಕಿವಿಯೊಳಿರಿಸೊ ॥ ೪ ॥ ತ್ವಕ್ಕು ಇಂದ್ರಿಯಗಳಿಂದ । ಕಾಮದಿ । ಸೊಕ್ಕಿ ನಾನೊಂದೆನಯ್ಯ । ಕಾಕುಮಾಡದೆ ಯೆನ್ನನು ಸಲಹಯ್ಯ । ಸಾಕಾರ ಶ್ರೀಕೃಷ್ಣನೆ ॥ ೫ ॥ ಶ್ರೀಃ ॥

## ೪೪. ರಾಗ ತೋಡಿ, ಅಟತಾಳ.

ಏನು ಸುಕೃತವ ಮಾಡಿದಳೊ ಯಶೋದೆ ॥ ಪಲ್ಲ ॥ ಶ್ರೀನಿಧಿಯಾದ ಕೃಷ್ಣನ ಕರದೆತ್ತಿಕೊಂಬುವಳಂತೆ ॥ ಅನುಪಲ್ಲ ॥ ಗಂಗಾಜನಕನಿಗೆ ಗಡಿಗೆ ನೀರೆರೆವಳಂತೆ । ಮಂಗಳಾಂಗನ ಶೃಂಗರಿಸುವಳಂತೆ ॥ ತುಂಗ ಭೂಧರನನ್ನ ತೊಟ್ಟಿಲೊಳಿಡುವಳಂತೆ । ಕಂಗಳಿಗಗೋಚರನನ್ನ ಕರದಪ್ಪಿಕೊಂಬುವಳಂತೆ ॥ ೧ ॥ ಜಗವನೆತ್ತಿದವನ್ನ ಮಗುವೆಂದೆತ್ತುವಳಂತೆ । ನಿಗಮಗೋಚರನ ನಿಟ್ಟಿಪಳಂತೆ ॥ ಅಗಣಿತ ಸಂಪನ್ನನ ಹಗ್ಗದಿ ಕಟ್ಟುವಳಂತೆ । ಮಿಗೆ ನಿತ್ಯ ತೃಪ್ತನಿಗೆ ಪಾಲನ್ನೆರೆವಳಂತೆ ॥ ೨ ॥ ಬಹುಮುಖನಿಗೆ ಭಾವೆ ಮದ್ದು ಚೆಪ್ಪವಳಂತೆ । ಅಹಿತಲ್ಪನಿಗೆ ಹಾವು ತುಳಿದ್ಯೆಂಬೊಳಂತೆ ॥ ಬಹು ದೈತ್ಯಸೂದನೆದೆ ಬಟ್ಟೆಬಟ್ಟೆ ಚುರ್ವಿರಿವಳಂತೆ । ಮಹಿಮ ನಾರಸಿಂಹಗೆ ಗುಮ್ಮನ ತೋರುವಳಂತೆ ॥ ೩ ॥ ಚತುರ್ಮುಖ ಪಿತನನ್ನ । ಸುತನೆಂದೆತ್ತುವಳಂತೆ । ಶ್ರುತಿವಿನುತಗೆ ಜೋಗುಳ ಪಾಡುವಳಂತೆ ॥ ಶತರವಿ ತೇಜಗಾರತಿಯನೆತ್ತುವಳಂತೆ । ಗತಭೀತನಿಗೆ ಭಾವೆ ರಕ್ಷೆಕಟ್ಟುವಳಂತೆ ॥ ೪ ॥ ಕಡಗೋಲ ನೇಣ ಕೈಯೊಳಗೆ ಪಿಡಿದುಕೊಂಡು । ಪಡುವಲಗಡಲ ದ್ವಾರಕನಿಲಯ ॥ ಬಿಡದೆ ನಿಲಿಸಿದ ಹಯವದನ ಮೋಹನ್ನ ಮುದ್ದು । ಉಡುಪಿಕೃಷ್ಣನ್ನ ಮಡಿಯೊಳೆತ್ತುವಳಂತೆ ॥ ೫ ॥

## ೪೫. ರಾಗ ಕಲ್ಯಾಣಿ, ಝಂಪೆತಾಳ.

ಸೇರಿದೆನು ಸೇರಿದೆನು ಜಗದೀಶನಾ ॥ ಪಲ್ಲ ॥ ನರಜನ್ಮದ ಭಯವು ಎನಗೆ ಇಲ್ಲ ॥ ಅನುಪಲ್ಲ ॥ ನೇತ್ರಗಳು ಶ್ರೀಕೃಷ್ಣನ ಮೂರ್ತಿ ನೋಡುತಲಿವೆ ।

ಶ್ರೋತ್ರ ಹರಿಕಥಾಶ್ರವಣಮಾಡುತಲಿಹದೊ ॥ ರಾತ್ರಿಹಗಲು ಯೆನ್ನ ಮನಸು ಶ್ರೀರಂಗನಲ್ಲಿ । ಮಾತ್ರವಾಡುತಿದೆನ್ನ ಗಾತ್ರ ಕೃಷ್ಣನ ಮುಂದೆ ॥ ॥ ೧ ॥ ಹಸ್ತಗಳು ಮಂಟಪ ಶುದ್ಧಿಯನು ಮಾಡುತಿವೆ । ಹಸ್ತಮಸ್ತಕವು ಹರಿಚರಣಕ್ಕೆರಗುತಿದೆ ಇದಕೊ ॥ ವಿಸ್ತಾರವಾದ ಪ್ರದಕ್ಷಿಣೆಯ ಮಾಡುತಿದೆ । ಕಸ್ತೂರಿಗಂಧ ಮೂಗು ಆಘ್ರಾಣಿಸುತಿದೆ ॥ ೨ ॥ ಹರಿನಾಮ ಸ್ಮರಣೆಯನು ನುಡಿಯುತಿದೆ ಯೆನ ಜಿಹ್ವೆ । ಹರಿಭಕುತಿ ಧೀಮತ್ತೆ ಪಾವನಗಳಿಂದ ॥ ಹರಿಪ್ರೀತಿಯಾಗಿದೆ ನೋಡಿದರೆ ಯೆನ್ನ ದೇಹ । ಶಿರಿಕೃಷ್ಣ ಬಾರೆಯ್ಯ ಯೆನ್ನ ಮಂದಿರಕೆ ॥ ೩ ॥ ಶ್ರೀಃ ॥

## ॥ ಶ್ರೀಮಧ್ವೇಶಾರ್ಪಣಮಸ್ತು ॥

### ೪೬. ರಾಗ ಪುನ್ನಾಗತೋಡಿ, ತ್ರಿಪುಟತಾಳ.

ಅಂಗನೆ ನೋಡುವ ಬಾರೆ ॥ ಪಲ್ಲ ॥ ಹೀಂಗಿರಲಾರೆ ನಿನ್ನಾಣೆ । ಕಂಗಳು ಪಡೆದ ಫಲವಾ । ರಂಗ ಕೊಳಲನೂದುತ ಗೋ । ಪಾಂಗನೇರು ನೆರದುಯೆಲ್ಲಾ । ಸಂಗಡ ಲೋಲಾಡುತಿಪ್ಪದು ॥ ಅನುಪಲ್ಲ ॥ ಏಣಲೋಚನೆ ಕೇಳವ್ವ । ದಾನವಾಂತಕನ ಕೈಯ । ವೇಣು ಮಾಡಿದ ಸುಕೃತ ಫಲವಾ ॥ ಪ್ರಾಣದೊಲ್ಲಭೆಯರೆಲ್ಲ । ಮಾಣದೆ ಸವಿವ ಅಧರ ಪಾನವಾ ತಾ ಸೂರೆಗೊಂಬುದಾ ॥ ತಾನು ನಿಲಿಸಿದ ವೃಕ್ಷಮೂಲಗ । ಳೇನು ಪುಣ್ಯಮಾಡಿದವೋ ॥ ಭೂ । ವನದಾ ಪುಣ್ಯಗಳನೇನೆಂಬೆ । ನಾನು ಮಾಡಿದ ಪೂರ್ವಸಂಚಿತ । ಯೇನು ಒದಗಿತೋ'ಕೃಷ್ಣರಾಯನ । ವೇಣುಗೀತಾಮೃತವ ಸವಿಯದೆ ॥ ೧ ॥ ಹುಲಿಯ ಹಿಂಡುಗಳೆಲ್ಲ । ಫುಲ್ಲನಾಭನ ಕೊಳಲಾಧ್ವನಿಯು । ಸೊಲ್ಲನೋಲೈಸುತ ವೇಗದೀ । ಚಲ್ಲಗಂಗಳೆರಂತೆ ಕೃಷ್ಣನಲ್ಲಿ ಚಿತ್ತವೆರಗಿ ಅನ್ಯ । ವಿಲ್ಲದಿಪ್ಪ ಸಡಗರವನೂ ॥ ಪಲ್ಲವಾಧರ ಪಾಣಿಯಿಂದಾ । ಮೆಲ್ಲನೆ ಮಧುರ ಗೀತವಾ । ಕಲ್ಲು ಬೆವರುವಂತೆ ಹಾಡಲು । ಹುಲ್ಲುಮೇವೊ ತುರುಗಳೆಲ್ಲ ತಲ್ಲಣದಿಂದಲಿ ಬಂದಾ । ವಲ್ಲಭೇರ ಮಾರಂತೆ ನೋಡಲು ॥ ೨ ॥ ಅರಗಿಳಿ ಹಂಸಗಳೆಲ್ಲ । ತರುಗಳ ಕೊಂಬೆಗಳನೇರಿ । ಪರಮ ಹರುಷದಿಂದ ಕುಳ್ಳಿರ್ದ ।

ಕೊರಳ ಕಲಕಲಾರವಗಳುಳುಹಿ । ಪರಮ ಪುರುಷನ ಧ್ಯಾನಾದಿಂದಾ । ಕರಗಿ ಕಂಬನಿಗಳನೆ ಸುರಿವುತ್ತ । ಸರಸೀಜಾಕ್ಷನ ವೇಣುಗೀತಾ । ಸ್ವರವನಾಲೈಸಿ ಬಾಹ್ಯವಾ । ತೊರೆದು ಯೋಗಿಗಳಂತೆ ಕುಳ್ಳಿರ್ದು । ಪರಮಹಂಸರಂತೆ ದಿನವನೂ । ಮರೆವೂ ಕೃಷ್ಣನಪಾದ ಭಕುತಿಯಾ । ಶರಧಿಯೊಳೋಲಾಡೊ ಸುಖವಾ ॥ ೩ ॥ ಶ್ರೀಃ ॥

೪೭. ರಾಗ ಶಂಕರಾಭರಣ, ರೂಪಕತಾಳ.

ರಂಗ ಬಾರ ಬಾಲೆ ಕುರಂಗನಯನೆ ಕೇಳೆ ॥ ಪಲ್ಲ ॥ ಹೀಂಗಿರಲಾರೆನೆ ಹರಿಯಸಂಗ ಬಿಟ್ಟ ಮೇಲೆ ಈ । ತಂಗಾಳಿಯು ಧಾಳಿ ಬೆಳದಿಂಗಳಿನ ಧಾಳಿ । ಗಿಳಿಭೃಂಗದ ಸ್ವರಗಳೆ । ದೇವಾಂಗನೇರ ಗಾಯನಗಳೆ । ಅ । ನಂಗಗಿದು ವೇಳೆ ॥ ಅನುಪಲ್ಲ ॥ ಅನ್ನವುದಕ ತೊರೆದೆ ಬಣ್ಣದೊಸ್ತ್ರವ ಮರೆದೆ । ಬಿನ್ನಣದಿ ಇಡುವಾ ತೊಡುವಾ । ಹೊನ್ನ ವಸ್ತುವ ಜರಿದೆ । ಸಣ್ಣವಳ ಮಾಡಿ । ಆರನ್ನೆಯಳ ಕೂಡಿ । ಯೆನ್ನ ಮೇಲೆ ಕೋಪದಿಂದ ಸಣ್ಣನುಡಿಗಳಾಡಿ । ಕಣ್ಣ ತೆರೆದು ನೋಡಿ । ಕಾಠಿನ್ಯ ರೂಪವ ತಾಳಿ । ಮಣ್ಣ ಕೆದರೀಡಾಡಿ । ದುರು । ಳನ್ನ ಉದರವ ತೋಡಿ । ಬಲಿ । ಯನ್ನ ದಾನವ ಬೇಡಿ । ತಾ । ತನ್ನೊಳು ಕಡದಾಡಿ । ಅ । ರಣ್ಯವಾಸವ ಮಾಡಿ । ಪುರ । ಹೆಣ್ಣುಗಳನೆ ಕೂಡಿ । ಬಲು । ಬಣ್ಣಗೆಟ್ಟೋಡಾಡಿ । ಕಲಿ । ಯನ್ನ ಸಂಹರ ಮಾಡಿ ॥ ೧ ॥ ಯುಗಳಸ್ತನಗಳ ಮೇಲೆ । ಒಳ್ಳೆ । ಮುಗುಳು ಮಲ್ಲಿಗೆ ಮಾಲೆ । ಬಗೆ । ಬಗೆ ಅಲಂಕಾರದಿ । ಸೊಗಸಿಲಿದ್ದ ವೇಳೆ । ಖಗವಾಹನ ಬಂದುಯೆನ್ನ । ಬಿಗಿದಪ್ಪುವೆನೆಂದ । ನಗುತ ಮಾತಾನಾಡಳಿವಳು ಸುಗುಣೆಯಲ್ಲವೆಂದ । ನಿಗಮ ಚೋರನ ಕೊಂದ । ನಗವ ಬೆನ್ನಿಲಿತಂದ । ಜಗವ ಸಲಹುವೆನೆಂದ । ಬಗೆದು ಕಂಬದಿ ಬಂದ । ಚಿಕ್ಕ ಮಗುವಿನಂದದಿ ನಿಂದ । ಯಾತ್ರೆಗಳ ಮಾಡೇನೆಂದ । ಅನ್ನಗಳ ಒಲ್ಲೆನೆಂದ । ಬೆಣ್ಣೆಗಳ ಕದ್ದುತಿಂದ । ನಗುತ ಬತ್ತಲೆನಿಂದ ತಾ । ಸಿಗದೆ ಓಡುವೆನೆಂದ ॥ ೨ ॥ ನಾರಿ ಈಗ ನಾನು । ಮುರಾರಿಯ ಕಂಡೆನು । ವಾರಿಜಾಕ್ಷ ಬಾರೆಯೆಂದು । ಶಿರವ ಬಾಗಿದೆನೆ । ಮಾರನಯ್ಯ ಜಾಣೆ

ಯೆನ್ನ । ಮೋರೆ ನೋಡಿದನೆ । ಜಾರನಾರಿಯಿವಳೆಂದು ತಾ ಶೇರದೆ ಪೋದನೆ ॥ ನೀರೊಳಗಡಗಿ ತಾನು ಮೋರೆ ಮುಚ್ಚಿದಾನೆ । ಕೋರೆ ತೋರಿದನೆ। ಆ।ಘೋರ ರೂಪಾದನೆ। ಬ್ರಹ್ಮ।ಚಾರಿಯಂತಾದನೆ। ಕ್ಷತ್ರಿ। ಯರ ತರಿದನೆ । ವಾರುಧಿಯ ದಾಟಿದನೆ । ಬಲು । ಜಾರನೆನಿಸಿದನೆ । ನಾರೇರ ವ್ರತವಳಿದನೆ । ಕುದುರೆ । ಯೇರಿದ ಶ್ರೀಕೃಷ್ಣನೆ ॥ ೩ ॥ ಶ್ರೀಃ ॥

## ೪೮. ರಾಗ ಪುನ್ನಾಗವರಾಳಿ, ಅಟತಾಳ.

ಪುಟ್ಟಿದೆ ಭುವಿಯಲ್ಲಿ ಬಲು ದಿನಗಳು ದೇವ । ಪುಟ್ಟಿಸಬೇಡ ಯೆನ್ನ ॥ ॥ ಪಲ್ಲ ॥ ಪಟ್ಟಾಭಿರಾಮನೆ ಪರಮ ಪುರುಷನೆ । ಘಟ್ಯಾಗಿ ನಿನ್ನ ಪಾದಗಳ ನಂಬಿದೆನೊ ದೇವಾ ॥ ಅನುಪಲ್ಲ ॥ ಎಂಭತ್ತನಾಲ್ಕು ಲಕ್ಷಗಳೆಂಬ ಜೀವರ ಯೋನಿಗಳಲಿ ಬಂದೆನಾ । ಕುಂಭಿನಿಯೊಳು ಪುಟ್ಟಿ ಬಹು ಪಾಪಂಗಳ ಮಾಡಿ । ಕುಂಭಿಪಾತಕದಿ ಬೆಂದೆನೊ । ಅಂಬುಜ ಮಿತ್ರನ ಸುತನಾಳುಗಳ ಕೈಯ । ಅಮಿತ ಯಾತನೆಗೊಂಡೆನೊ । ಅಂಬುಜನಾಭ । ಅಖಿಳ ಸುರರೊಡೆಯ । ಆರ್ತಾರ್ತಿಹರನೆಂದು ಬೇಡಿದೆ ನಾನು ॥ ೧ ॥ ಜೇನಿನೊಳು ಬಿದ್ದ ನೊಣನಂತೆ । ಸತಿಸುತ ಜನಪ ಬದ್ಧನಾದೆನೊ । ಮೀನು ಮಾಂಸದ ಆಸೆಗೆ ಹೋಗಿ । ಸಿಕ್ಕಿದಂತೆ ಮೋಸಹೋದೆನೊ । ನಾನು ಬರಿದೆ ಏಣವು ಕಿಂಕಿಣಿ ಧ್ವನಿಗೆ ಮರುಳಾದ ತೆರನಂತೆ। ಇಳೆಯೊಳಗೆ ಮಂಕಾದೆನೊ । ಯೇನೆಂಬೆ ದಾಸನ ಕೋಡಗನಂದದಿ ಯೆಲ್ಲರಿಗಾಗಿ ನಾ । ಕುಣಿದೆ ಜನರ ಮುಂದೆ ॥ ೨ ॥ ಕಾಯ ಪೋಷಣೆಗಾಗಿ । ಹೇಯಕರ್ಮಂಗಳ ಕಾಲಕಾಲ ಮಾಡಿದೆನೊ । ಬಾಯಾಪತಿಗಳ ರಕ್ಷಣೆಯ ಮಾಡೆ । ಅವರಿಂದ ಜಾಗರೂಕನಾದೆನೊ । ಭಯರಹಿತನಾಗಿ ಗುರುಹಿರಿಯರ । ಪಾದ ಭಜನೆಮಾಡದೆ ಪೋದೆನೊ । ಕಾಯಜನಯ್ಯನೆ । ಸಿರಿ ಕೃಷ್ಣದೇವನೆ । ಕಾಯಬೇಕೆನ್ನಪರಾಧಗಳನೆಲ್ಲ ॥ ೩ ॥

## ೪೯. ರಾಗ ಪೂರ್ವಿ, ಝಂಪೆತಾಳ.

ನೀನೆ ವರಗುರು ಮುಖ್ಯಪ್ರಾಣ । ನಿರಂತರವು ನಂಬಿದೆನು ॥ ಪಲ್ಲ ॥ ನಿಖಿಳ ಗುಣಪೂರ್ಣ ಜಾಣೆ ಕೋಮಲೆ ಭಾರತೀಶ । ಸಕಲ ಪ್ರಾಣಿಗಳ

ಹೃದಯದಲಿ ವಾಸ ಸುರೇಶ ॥ ಅನುಪಲ್ಲ.॥ ವಾತಸುತನಾಗಿ ರಘುನಾಥ ಪ್ರಿಯ । ದೂತ ಬಲು ಯೂಥ ಲಂಕೆಯ ಪೊಕ್ಕು । ಖ್ಯಾತಿಯನೆ ಪಡದಿ । ಸೀತೆಗುಂಗುರವಿತ್ತು ॥ ವೀತಿಹೋತ್ರಗೆ ಪರಮ ಪ್ರೀತನೆನಿಸಿ । ದಾತ ದಿತಿಜಾತರಿಗೆ ಭೀತಿಕರ ॥ ೧ ॥ ಲಂಡಕೀಚಕ ಬಕನ ಮಂಡೆ ಯನೆ ಒಡದು । ಉ । ದ್ದಂಡ ಮಗಧೇಶನ ದಂಡವನು ಶೀಳಿ ॥ ಲಂಡ ಕೌರವರಶಿರ ಚೆಂಡಾಡಿ ಪ್ರಬಲ ರಣ । ಮಂಡಲದಿ ಚಂಡರಿಪು ಬಂಡ ರನು ದಂಡಿಸಿದ ॥ ೨ ॥ ಸಾಂಗದಲಿ ಮಧ್ವಮತದಂಗವನು ಏರ್ಪಡಿಸಿ। ಕಂಗೆಟ್ಟ ಕುಮತ ದುಸ್ಸಂಗವನೆ ಅಳಿದು ॥ ಗಂಗೆಪಿತ ಕೃಷ್ಣ ಪದ ಭೃಂಗ ಮೂರ್ಜಗದೊಳಗೆ । ತುಂಗ ಭವಭಂಗ ದಯಾಪಾಂಗ ಯತಿ ಪುಂಗವನೆ ॥ ೩ ॥ ಶ್ರೀಃ ॥

### ೫೦. ರಾಗ ಕಾಂಬೋಧಿ, ಆದಿತಾಳ.

ಉಕ್ಕುವ ತುಪ್ಪದಿ ಕಯ್ಯ । ನಿಕ್ಕುವೆನಯ್ಯ ॥ ಪಲ್ಲ ॥ ಚಿತ್ರಧರ ಪರ ಮಾತ್ಮ । ನೊಬ್ಬನಲ್ಲದಿಲ್ಲವೆಂದು ॥ ಅನುಪಲ್ಲ ॥ ಪರಮಾತ್ಮನೆ ಗತಿ ಯೆಂದು ಕರಿಮೊರೆ ಇಡಲು ಕೇಳಿ । ನೆರೆದ ಬೃಂದಾರಕರೆಲ್ಲ । ಪೊರೆದರೆ ಬಂದು ಕರೆದಲೊಪ್ಪುವ ಮುಕ್ತಿಗೆ । ಕನ್ನಡಿಯ ನೋಡಲೇಕೆ । ಭರದಿ ಗಜೇಂದ್ರನ ಕಾಯ್ದ ಹರಿಯೆ ಪರದೈವವೆಂದು ॥ ೧ ॥ ಮತಾಂತರ ದಿಂದದ್ವೈತವೆಂದು । ವಾತವನು ಗುದ್ದಿ ಕೈನೋಯಲೇಕೆ । ಏತತ್ಸ ರ್ವಾಣಿಯೆಂಬೊ ಗೀತಾರ್ಥವ ತಿಳಿದು । ಜ್ಯೋತಿರ್ಮಯನ ಕಿರೀಟಿಕು ತನಂತರ್ಯಾಮಿ ಯೆಂದು ॥ ೨ ॥ ತಾನೆ ಪರಬ್ರಹ್ಮನೆಂಬೊ । ಮನು ಷ್ಯಾಧಮನು ತನ್ನ । ಜ್ಞಾನಹೀನನಾಗಿ ಲೋಕ । ದಾನವನೆಂಬು ವನು । ಭಾನುಕೋಟಿ ತೇಜೋತ್ತಮ । ಪರತರ ಶ್ರೀಹರಿಯೆಂಬೊ । ಜ್ಞಾನದ ಸೋಪಾನನಿಧಿ ಸಭೆಯಲ್ಲಿ ॥ ೩ ॥ ತಪ್ಪುವಚನಗಳೆಂದು । ತತ್ತ ರಗೊಂಬುವದೇಕೆ । ತಪ್ಪು ಶಾಸ್ತ್ರಂಗಳೋದಿ ದೇಹದಂಡಿಸಲೇಕೆ ॥ ಕಲ್ಪಕಲ್ಪಾಂತರದಿ ವಟಪತ್ರಶಯನನೆಂದು । ಮುಪ್ಪುಮೊದಲಿಲ್ಲದ ಮುಕುಂದನೆ ಪರದೈವವೆಂದು ॥ ೪ ॥ ಶಕ್ತಿಶೂನ್ಯನೆಂದು । ಸಂಶಯ

ಪತುವದೇಕೆ ಕೃತ್ಯದಿಂ ನೋಡಲು । ವಿಷ್ಣುವೊಬ್ಬನೆ ಹತ್ತಾರು ಸಾವಿರ ಗೋಪಿಕಾಸ್ತ್ರೀಯರನಾಳ್ದ । ನಿತ್ಯ ಬ್ರಹ್ಮಚಾರಿಯಾದ ಶ್ರೀಕೃಷ್ಣನಲ್ಲದಿಲ್ಲ ವೆಂದು ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೫೧. ರಾಗ ಸುರುಟಿ, ಅಟತಾಳ.

ರಂಗಯ್ಯ ಮನೆಗೆ ಬಂದರೆ ಅಂತ । ರಂಗದಿ ಗುಡಿಕಟ್ಟಿ ಕುಣಿವೆನೊ ॥ ॥ ಪಲ್ಲ ॥ ಎಳೆತುಲಸಿಯ ವನಮಾಲೆಯು । ಹೊಳೆವ ನೀಲದ ಪೈಥಾಳವು ॥ ಪೊಳೆವ ಪಂಜರದ ಗಿಣಿಯಂತೆ ನಮ್ಮಂ । ಗಳಕೆ ಬಂದ ಭಾಗ್ಯವ ನೋಡೆ ॥ ೧ ॥ ಬಾಡಿದ ಮಾವು ಪಲ್ಲವಿಸಲು ಯೆಲ್ಲಿ । ನೋಡಲು ಜಗವು ಪುಲ್ಲೈಸಲು ॥ ಮಾಡಿದ ಮನದ ಪಾಪಗಳೆಲ್ಲ । ಎತ್ತ । ಲೋಡಿತು ಹರಿಬಂದ ಭರದಿಂದ ॥ ೨ ॥ ಬಿಸಿಲು ಬೆಳದಿಂಗಳಾದವು ತ । ಮಸು ಹೋಗಿ ಉದಯವಾಯಿತು ನೋಡೆ ॥ ವಸುದೇವ ಸುತ ನಮಗೊಲಿದರೆ ಅಲ್ಲಿ । ವಿಷ ಹೋಗಿ ಅಮೃತವಾಯಿತು ನೋಡೆ ॥ ॥ ೩ ॥ ಹಾವು ನೇವಳವಾಯಿತು ಅಲ್ಲಿ । ದಾವಾನಲ ತಂಪಾಯಿತು ॥ ಬೇವು ಸಕ್ಕರೆಯಾಯಿತು ನಮ್ಮ । ದೇವಕಿಸುತ ಬಂದರೆ ನೋಡೆ ॥ ೪ ॥ ಜಾಣೇರರಸ ಕೇಳು ರಂಗನು । ತನ್ನ । ಸೇರಿದವರ ಬೆನ್ನ ಬಿಡನಮ್ಮ ॥ ಏನಾದರು ನಮ್ಮನಗಲನೆ । ನಮ್ಮ । ಮಾನಾಭಿಮಾನಾದೊಡೆಯ ಶ್ರೀಕೃಷ್ಣ ॥ ೫ ॥ ಶ್ರೀಃ ॥

೫೨. ರಾಗ ರೇಗುಪ್ತಿ, ರೂಪಕತಾಳ.

ನಿನ್ನ ಮಗನೇನೆ ಗೋಪಿ ಗೋಪ್ಯಮ್ಮ ॥ ಪಲ್ಲ ॥ ಚನ್ನರ ಚೆಲುವ ಶ್ರೀ ಉಡುಪಿನ ಕೃಷ್ಣರಾಯ ॥ ಅನುಪಲ್ಲ ॥ ಮುಂಗುರುಳು ಮುಂದಲೆಗೆ ಭಂಗಾರದರಳೆಲೆ । ರಂಗುಮಾಣಿಕದ ಹೊಸ ಉಂಗುರವನಿಟ್ಟು ॥ ಪೊಂಗೆಜ್ಜೆ ಕಾಲ್ಗಡಗ ಘಲು ಘಲು ಘಲುಕೆನುತ । ನ । ಮ್ಮಂಗಳದೊಳಾಡುತಿಹ ಈ ಮುದ್ದು ಕೃಷ್ಣಬಾಲಾ ॥ ೧ ॥ ಕಟವಾಯಿ ಬೆಣ್ಣೆ ಕಾಡಿಗಿ

ಕಣ್ಣು ಕಟಿಸೂತ್ರ । ಪಟ್ಟವಾಳಿ ಕೌಪೀನ ಕೊರಳಲ್ಲಿ ಪದಕ ॥ ಸಟೆ ಇಲ್ಲ ಬ್ರಹ್ಮಾಂಡ ಹೃದಯದೊಳಿಂಬಿಟ್ಟ । ವಿಟ ವಿಟಯೋಡುತಿಹನೀಮುದ್ದು ರಂಗಾ ॥ ೨ ॥ ಹರಿವ ಹಾವನೆ ತಂದು ಹೆಡೆ ಹಿಡಿದು ಸಿಲಿಸುವ । ಕರುವಾಗಿ ಆಕಳ ಮೊಲೆಯ ತಿಂಬ ॥ ಅರಿದಾಗಿ ನೋಡಿದರೆ ಅಂತರಂಗ ಸ್ವಾಮಿ । ಧರೆಯೊಳಂಬುಧಿ ತೀರದುಡುಪಿಯ ಶ್ರೀಕೃಷ್ಣ ॥ ೩ ॥

## ೫೩. ರಾಗ ಪೂರ್ವಿ, ಆದಿತಾಳ.

ನಿನ್ನ ನೋಡಿ ಧನ್ಯನಾದೆನೊ । ಹೇ ಶ್ರೀನಿವಾಸ ॥ ಪಲ್ಲ ॥ ನಿನ್ನ ನೋಡಿ ಧನ್ಯನಾದೆ । ನೆನ್ನ ಮನದಿ ನಿಂತು ಸುಪ್ರ । ಸನ್ನ ದಯಮಾಡಿ ನೀನು । ಮುನ್ನಿನಂತೆ ಸಲಹಬೇಕು ॥ ಅನುಪಲ್ಲ ॥ ಲಕ್ಷ್ಮಿರಮಣ ಪಕ್ಷಿವಹನ । ಕಕ್ಷ ನಿನ್ನದಲ್ಲೆ ಪಾಂಡು ॥ ಪಕ್ಷ ದೈತ್ಯರ ಶಿಕ್ಷ । ರಕ್ಷಿಸೆನ್ನ ಕಮಲಾಕ್ಷ ॥ ॥ ೧ ॥ ದೇಶದೇಶವನ್ನು ತಿರುಗಿ । ಆಶೆ ಬದ್ಧನಾದೆ ಸ್ವಾಮಿ ॥ ವಾಶ ನಿನ್ನದಲ್ಲ ಜಗ । ದೀಶ ಕಾಯೊ ವಾಸುದೇವ ॥ ೨ ॥ ಕಂತುಜನಕ ಕೇಳೊ ಯೆನ್ನ । ಅಂತರದ ಸೇವೆಯನ್ನು ॥ ಅಂತರವಿಲ್ಲದೆ ಸಲಹಬೇಕು । ಹೊಂತಕಾರಿ ಮುದ್ದು ಕೃಷ್ಣ ॥ ೩ ॥ ಶ್ರೀಃ ॥

## ೫೪. ರಾಗ ಶಂಕರಾಭರಣ, ಆದಿತಾಳ.

ಹಿಂದೆ ಇಂದು ಮುಂದೆ ಎಂದೆಂದಿಗು । ಬಂಧು ನಮಗೆ ಗೋವಿಂದನೆ ಕಾಣಿರೊ ॥ ಪಲ್ಲ ॥ ತನುಮನ ಕರಣ ಭೋಗಂಗಳ ನಿರ್ಮಿಸಿ । ಅನಿಮಿಷರನ್ನು ಪ್ರೇರಕರ ಮಾಡಿ । ದಿನದಿನದಲಿ ಬಪ್ಪ ಎಡರುಗಳ ತಪ್ಪಿಸಿ । ದನುಜಾರಿ ನಮ್ಮನು ಪೊರೆವ ಕಾರುಣ್ಯದಿ ॥ ೧ ॥ ಹೊತ್ತು ಹೊತ್ತಿಗೆ ಬಪ್ಪ ದೋಷ ರಾಶಿಯ ನೋಡಿ । ಮತ್ತೆ ಯಮ ದೂತರು ಎಳವಾಗಲು ॥ ಮತ್ತೆ ಪಾಪಂಗಳು ಸ್ಮರಣೆ ಮುಂದೋರಿಸಿ । ತೆತ್ತಿಗನಂದದಿ ಪೊರೆವ ಕರುಣದಿ ॥ ೨ ॥ ಭವದ ಬೇಗೆಯಿಂದ ಕೆಗದೆತ್ತಿ ತನ್ನಯ । ನವವಿಧ ಭಕುತಿರಸವನುಣಿಸಿ ॥ ಸವಿಯಾದ ಸುಖವಿತ್ತು ಪಕ್ಷದೊಳಿಟ್ಟು ತ । ನ್ನವನೆಂದು ಸಲಹುವ ಕರುಣದಿ ಕೃಷ್ಣಯ್ಯ ॥ ೩ ॥ ಶ್ರೀಃ ॥

೫೫. ರಾಗ ಕಾಂಬೋಧಿ, ಝಂಪೆತಾಳ.

ನಾನೆಲ್ಲಿ ಜ್ಞಾನಿಯು ನಾನೆಲ್ಲಿ ಸುಜನಾ । ಹೀನ ವಿಷಯಗಳುಂಬ ಶ್ವಾನನಂತಿರುವೆ ॥ ಪಲ್ಲ ॥ ಮೂತ್ರದ ಮನೆಗಾಗಿ ಗಾತ್ರಬಳಲಿಸಿ ಮದನ । ಸೂತ್ರ ಬೊಂಬೆಯುಯೆನಿಸಿ ನೇತ್ರದಿಂದ ॥ ಪಾತ್ರದವರ ನೋಡಿ ಸ್ತೋತ್ರಮಾಡುತ ಹಿಗ್ಗಿ । ರಾತ್ರಿಹಗಲು ಕೆಟ್ಟವಾರ್ತೆಯಲ್ಲಿರುವೆ ॥ ೧ ॥ ಧನದಾಶೆ ಘನವಾಗಿ ಅಣುಮಹ ಕಾರ್ಯದೊಳು । ಸೆಣಿಸಿ ದಣಿಯಲು ತೃಣವು ದೊರೆಯದಿರಲು ॥ ಮನೆ ಮನೆ ಬಾಯ್ದೆರೆದು ಶುನನಂತೆ ದಿನಗಳೆವೆ । ಮನುಜ ಪಶುವಿಗೆ ಇನ್ನು ಮುನಿಯೆಂಬೆಯೆಂತೋ ॥ ೨ ॥ ನಾಲಿಗೆಯ ರುಚಿಯಿಂದ ಸಾಲದಾಯಿತು ಬಯಕೆ । ಕಾಲ ಕಾಲಕೆ ನೆನೆಸಿ ಹಾಳಾದರು ॥ ಶೀಲಗಳ ಕಳಕೊಂಡು ಚಾಲುವರಿಯುತ ಪರರ । ಆಲಯದ ಉಚ್ಛಿಷ್ಟ ಮೇಲಾದ ಸವಿಯು ॥ ೩ ॥ ಸ್ನಾನ ಧ್ಯಾನವನರಿಯೆ ಸಾನುರಾಗದಿ ಭಕ್ತಿ । ಖೂನವಿಲ್ಲದ ಡಂಭ ಮೌನಿಯೆನಿಸಿ ॥ ನಾನಾ ವಿಷಯ ಮನದಿ ನಾನೆನೆಸುವೆ ನಿತ್ಯ । ಏನಾದರು ಕಷ್ಟ ಕಾಣದಂತಿರುತಿಪ್ಪೆ ॥ ೪ ॥ ಪತಿತರೊಳು ಎನ್ನಂಥ ಪತಿತರೊಬ್ಬರ ಕಾಣೆ । ಗತಿಯು ನೀನಲ್ಲದೆ ಅನ್ಯರಿಲ್ಲ ॥ ಪತಿತ ಪಾವನನೆಂಬೊ ಬಿರುದುಂಟುಮಾಡುವ । ಕ್ಷಿತಿಪತಿ ಶ್ರೀಕೃಷ್ಣರಾಯ ನೀನಹುದು ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೫೬. ರಾಗ ಧನಾಸಿ, ಆದಿತಾಳ.

ಗೋವರ್ಧನ ಗಿರಿಧರ ಪಾಹಿ । ಸಿರಿಧರ ಗಿರಿಧರ ಶ್ರೀಧರ ಪಾಹಿ ॥ ॥ ಪಲ್ಲ ॥ ಮಧ್ವತೀರ್ಥವಾಸಾ । ಪದ್ಮಾಲಯಾಧೀಶ ॥ ಹೃದ್ಧ್ಯಾನನ ಮೂರುತಿ ಪಾಹಿ ॥ ೧ ॥ ತಂತ್ರಸಾರ ಸ್ಥಿರ । ಮಂತ್ರ ಸುಪೂಜಿತ ॥ ಮಂತ್ರಾಲಯ ಮೂರುತಿ ಪಾಹಿ ॥ ೨ ॥ ರಜತಪೀಠವಾಸಾ ರಾಜಕಿರೀಟೇಶಾ । ರಾಜಾನನ ಮೂರುತಿ ಪಾಹಿ ॥ ೩ ॥ ವಕ್ರತುಂಡ ಪಿತ ಶಕ್ರಮುಖಾರ್ಚಿತ ॥ ವಕ್ತ್ರಾನನ ಮೂರುತಿ ಪಾಹಿ ॥ ೪ ॥ ವಾಸುದೇವ ಸರ್ವರ । ಶ್ರೀಷ್ಟದಾಯಕ । ಕಂಸಾಂತಕ ಸಿರಿಕೃಷ್ಣ ಪಾಹಿ ॥ ೫ ॥ ಶ್ರೀಃ ॥

೫೭. ರಾಗ ಸಾವೇರಿ, ಅಟತಾಳ.

ಘಟಿಕಾಚಲ ವಾಸಿಯ ನೋಡಿ । ಶಿಷ್ಟರು ಕೂಡಿ । ಇಷ್ಟವ ಬೇಡಿ ॥ ॥ ಪಲ್ಲ ॥ ಚತುರ್ಭುಜ ಮುಖ್ಯಪ್ರಾಣನೆಂದೆನಿಸೀ । ಚತುರಾಧಿಪತಿ ಯಿತ್ತಧಿಕನಿಸೀ ॥ ಚತುರರತನದಿ ನಮ್ಮ ಕಡೆಹಾಯಿಸಿ । ಚತುರ್ವಿಧ ಇಷ್ಟಾರ್ಥವ ಕರೆಸೀ ॥ ೧ ॥ ಅಂದು ಹನುಮಂತನಾದವನೀತಾ । ಬಂದು ರಾಮರ ಸೇವಿಸಿದಾತಾ ॥ ಸಿಂಧುವನುಲ್ಲಂಘಿಸಿದಾತಾ । ಇಂದು ಮುಖಿಗೆ ಉಂಗುರ ಕೊಟ್ಟಾತಾ ॥ ೨ ॥ ದ್ವಾಪರದಲಿ ಭೀಮಸೇನನಾಗಿ । ಪಾಪಿ ಕೀಚಕನ ಕೋಪದಿ ಕೊಂದು ॥ ಶ್ರೀಪತಿ ಕೃಷ್ಣಗೆ ಶರಣೆಂದು । ನಮ್ಮ । ಪಾಪವ ಪರಿಹರಿಸುವ ಬಂದು ॥ ೩ ॥ ತ್ರೇತಾಯುಗದಿ ನೀನವ ತಾರೀ । ನೆನೆವರ ಹೃದಯದಲಧಿಕಾರೀ ॥ ಪೊಗಳುವರಿಗೆ ಬಹು ಸಾಕಾರೀ । ನಮ್ಮ । ಸುಲಭ ನರಸಿಂಹಗೆ ಅನುಸಾರೀ ॥ ೪ ॥ ಕಲಿಯುಗದಲಿ ಯತಿ ರೂಪನಾಗಿ । ಕುಲಹೀನ ಸಂಕರ ಮತವನೀಗೀ ॥ ಸುಲಭದಿಂದಲಿ ಸನ್ಮತವ ಬಾಗೀ । ನಮ್ಮ । ಭಳಿರೆ ಶ್ರೀಕೃಷ್ಣನ ಬಂಟನಾಗೀ ॥ ೫ ॥

೫೮. ರಾಗ ಪೂರ್ವಿ, ರೂಪಕತಾಳ.

ವಾದಿಗಳೆಲ್ಲರ ಗೆದ್ದ । ವಾದಧೀರನೆ ॥ ಪಲ್ಲ ॥ ವಾದಿರಾಜ ಗುರುರಾಯ । ಸಾಧುಪ್ರಿಯ ಗೇಯಕಾಯ ॥ ಅನುಪಲ್ಲ ॥ ಮುಂದುವರಿದು ಬಂದ ವಾದಿ ಯವೃಂದಗಳನು । ಒಂದು ಮಾತಿನಿಂದ ಅವರ ಮುಂದೆ ಕೆಡಿಸಿ ॥ ಕುಂದಿಸಿ ಕುಂದಿಸಿ ನಂದದಿ ನಲಿವ ॥ ೧ ॥ ಮತ್ತರಾದ ಜನರ್ಗಳೆಲ್ಲ ಸುತ್ತ ಮುತ್ತ ನೋಡುತಿರಲು । ಮತ್ತೆ ಅವರ ನೆತ್ತಿಯ ತೊಣೆದು । ಹತ್ತಿದೆ ಮುತ್ತಿನ ಗದ್ದಿಗೆಯನ್ನು ॥ ೨ ॥ ನಿನಗೆ ಎಣೆಗಾಣೆ ನವದಿನಪತೇಜ ಮಧ್ವಮುನಿಯ । ಮನದ ಒಡೆಯ ಮುದ್ದು ಶ್ರೀಕೃಷ್ಣನ । ನೆನೆದು ನೆನೆದು ತನುವನಲ್ಲವೆ ॥ ೩ ॥ ಶ್ರೀಃ ॥

೫೯. ರಾಗ ಪೂರ್ವಿ, ರೂಪಕತಾಳ.

ವರ್ಣಿಸಲಳವೆ ಗುಣಸಾಂದ್ರನ ॥ ಪಲ್ಲ ॥ ಕರ್ಣಜನಕ ಕೋಟಿತೇಜ ಶ್ರೀಶಭಜಕ ಜಯ ಮುನೀಂದ್ರನ ॥ ಅನುಪಲ್ಲ ॥ ಮಧ್ವಶಾಸ್ತ್ರ ದುಗ್ಧ

ನಿಧಿಯ । ಬುದ್ಧಿಯೆಂಬ ಮಂದರಗಿರಿಯು । ಶುದ್ಧಸೂತ್ರ ನೇತ್ರದಿಂದ । ಬಧ್ಧವ ಮಾಡಿ ಪಿಡಿದು ಕಡೆದು । ಶುದ್ಧ ಯುಕುತಿ ಸುಧೆಯತೆಗೆದನಾ । ಶಿಷ್ಯಜನಕೆ । ಶ್ರದ್ಧೆಯಿಂದ ಅದನು ಎರದನ । ಕ್ರೋಧದಿಂದ । ಕ್ರುದ್ಧ ನಾದಿ ದೈತ್ಯರ ಗೆಲಿದನ । ಜಯ ಮುನೀಂದ್ರನ ॥ ೧ ॥ ಮಾಸಿಪಿ ಯರ ಶೀಲರಾದ । ಮಾನವರಸು ಜರೆದು ಹರಿಯು । ಧ್ಯಾನದಲ್ಲಿ ನಿಲ್ಲಿಸಿ ಒಲಿಸಿ । ಹಾನಿಯಿಲ್ಲದ ಮುಕುತಿ ಪಡೆದ । ಜ್ಞಾನ ಮತವಜಗಕೆ ಸಾರ್ದನ । ಶಿಷ್ಯಜನಕೆ । ಸಾನುರಾಗದಿ ತತ್ವ ಪೇಳ್ದನ । ಜಯ ಮುನೀಂ ದ್ರನ ॥ ೨ ॥ ಸರಸದಿಂದ ಮೂರುಯೋಳು । ವಿರಸ ದುಷ್ಟ ಭಾಷ್ಯಗ ಳನು । ಗೆಲಿದಕ್ಷ್ನೋಭ್ಯತೀರ್ಥಯತಿಪ । ಕರ ಸಂಜಾತ ರಮ್ಯಚರಿತ । ಶರಣಜನರ ಪೊರವ ಯತಿಪನ । ಶಿಷ್ಯಜನರ । ದುರುಳ ಮೋಹತಿಮಿರ ದಿನಪನ । ನಮ್ಮ ಪರಮ । ಗುರು ಶ್ರೀಕೃಷ್ಣನ ಪಾದಭಜಕನ । ಜಯ ಮುನೀಂದ್ರನ ॥ ೩ ॥ ಶ್ರೀಃ ॥

## ೬೦. ರಾಗ ತೋಡಿ, ಆದಿತಾಳ.

ಕಂದನಿಗೆ ಕಾಲಿಲ್ಲವಮ್ಮ । ಪುಟ್ಟ । ದಂದಿನಿಂದಿಗೂ ಈ ಕಂದನಿಗೆ । ಅಂಬೆಗಾಲು ಬಿಡನಮ್ಮ ॥ ಪಲ್ಲ ॥ ಮಳೆಹೊಳೆಯು ಕತ್ತಲೊಳು ತರಳ ಮಗ ಬೇರನೊ । ಕಳೆಯುಳ್ಳ ಮುಖಕ್ಕೀಗ ಗ್ರಹ ಸೋಂಕಿತೋ ॥ ಎಳೆಯ ಬೆಳದಿಂಗಳೊಳು ಎತ್ತಣ ದೃಷ್ಟಿತಾಗಿತೋ । ಲಲನೆ ಮಿಾಸಲು ಹಾಲು ಮರೆದೆರೆದ ಪರಿಯೊ ॥ ೧ ॥ ಬೆಣ್ಣೆಯ ಮೆಲ್ಲುತ ತಾ ಬಳಲಿ ಬಾಯಾರಿದನೊ । ಉಣ್ಣೆ ಪೂತನಿ ಮೊಲೆಯ ವಿಷಸೋಂಕಿತೊ ॥ ಅಣ್ಣ ಪಾಪಿಯ ಭಯಕೆ ಅಂಜಿ ಕಾಲ್ಕೆಟ್ಟನೊ । ಹೆಣ್ಣು ದೈತ್ಯೆಯರ ಕಾಲಲ್ಲಿ ಬಂದ ಸರಕೋ ॥ ೨ ॥ ಧುರವಿಜಯ ಕೃಷ್ಣರಾಯಗೆ ನಿಮ್ಮ ಚಿಕ್ಕ । ಹರದೇರಂದಿನ ತೋರ ಬಂದ ಪರಿಯೋ ॥ ಧರೆಗಧಿಕನೆಂದೆನಿಪ ವಿದ್ಯನಗರ ಒಳಿತೆಂದು ಉದ್ದ । ಗಿರಿಯಿಂದ ಬಂದ ಮುದ್ದು ಬಾಲಕೃಷ್ಣ ನಮ್ಮ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಕಲ್ಯಾಣಿ, ಅಟತಾಳ.

ಪ್ರಾಣ ನೀನಹುದೊ । ಗುರು ಮುಖ್ಯ । ಪ್ರಾಣ ನೀನಹುದೊ ॥ ॥ ಪಲ್ಲ॥ ರಾಣಿ ಭಾರತಿರಮಣಗೆಣೆಗಾಣೆ ತ್ರಿಭುವನದೊಳಗೆ ಸಕಲ। ಪ್ರಾಣಿಗಳ ಹೃದಯದಲಿ ಮುಖ್ಯಪ್ರಾಣ ನೀನೆಲೆ ಪ್ರಾಣನೆನಿಸಿದ ॥ ಅನುಪಲ್ಲ ॥ ಧೀರ ನೀನಹುದೋ । ವಾಯುಕು। ಮಾರ ನೀನಹುದೊ ॥ ಕೋರಿದರಿಗೆ ಮನೋವ್ರತಗಳ । ಭಾರಿಭಾರಿಗೆ ಕೊಡುವೆನೆನುತಲಿ। ಕ್ಷೀರ ನದಿಯ ತೀರ ನೆಲಸಿದ । ಮಾರುತಾವತಾರ ಹನುಮ ॥ ೧ ॥ ದಿಟ್ಟ ನೀನಹುದೊ । ಬೆಟ್ಟವ ತಂ । ದಿಟ್ಟವ ನೀನಹುದೊ ॥ ಅಟ್ಟಿ ಬಡದು ಆ ಅಕ್ಷಕುಮಾರನ । ಕುಟ್ಟಿ ಬೇಗದಿ ಕೆಡಹಿ ಲಂಕೆಯ । ಸುಟ್ಟು ಸೀತೆಗೆ ಉಂಗುರವನೆ। ಕೊಟ್ಟ ಮೂಜಗ ಜಟ್ಟಿ ಹನುಮಾ ॥ ೨ ॥ ಚಂಡನು ನೀನಹುದೋ । ದುರಿತ ಮಾ । ರ್ತಾಂಡನು ನೀನಹುದೊ ॥ ಅಂದುಗೆ ಕಿರುಘಂಟೆ ಉಡಿಯಲಿ । ಚಂದದಲಿಯೋಲಾಡುತಿರಲಾ । ನಂದದಲಿ ಶ್ರೀಕೃಷ್ಣನಂಘ್ರಿ । ಪುಂಡರೀಕಕೆ ಕೈಮುಗಿದಾ ॥ ೩ ॥ ಶ್ರೀಃ ॥

## ೬೨. ರಾಗ ಬಿಲಾರಿ, ಅಟತಾಳ.

ಕಡಗೋಲ ತಾರೆನ್ನ ಚಿನ್ನ । ನೊಸ । ರೊಡದರೆ ಬೆಣ್ಣೆಬಾರದು ಮುದ್ದು ರಂಗಾ ॥ ಪಲ್ಲ ॥ ಅಣ್ಣನೊಡಗೊಂಡು ಬಾರೈಯ । ಸವಿ। ಬೆಣ್ಣೆಯ ಮುದ್ದೆ ಮೆಲುವಿರಂತೆ ॥ ಬಣ್ಣಸರವನ್ನು ನಿನ್ನ ಕೊರಳೊಳು ಹಾಕುವೆ । ಚಿಣ್ಣರೊಡನೆ ಆಡಕಳುಹುವೆ ರಂಗಾ ॥ ೧ ॥ ಪುಟ್ಟ ಬಚ್ಚಿಯ ತಂದು ನಿನ್ನ । ಚಿನ್ನದ । ತೊಟ್ಟಿಲ ಕಾಲಿಗೆ ಕಟ್ಟಿಸುವೆ ॥ ಬಟ್ಟಲುತುಂಬಿ ಸಕ್ಕರೆ ನಿನಗೀವೆ । ಕಟ್ಟಾಣಿಮುತ್ತಿನ ಮಣಿಯ ಅರಗಿಣಿಯೆ ॥ ೨ ॥ ಬಡವರ ಭಾಗ್ಯನಿಧಿಯೆ । ಗೋಕುಲದಯ್ಯಯೆ । ನ್ನೊಡೆಯ ಮಾಣಿಕದರಳೆ ॥ ಕಡು ಮುದ್ದು ಉಡುಪಿಯ ಶಿರಿಕೃಷ್ಣಯ್ಯ । ಪೊಂ । ಗೊಡದೊಳು ದುಡುಕುಮಾಡುವರೇನೋ ರಂಗಾ ॥ ೩ ॥ ಶ್ರೀಃ ॥

## ೬೩. ರಾಗ ಮುಖಾರಿ, ತ್ರಿಪುಟತಾಳ.

ದಾಸರೆಂದರೆ ಪುರಂದರದಾಸರಯ್ಯ ॥ ಪಲ್ಲ ॥ ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ॥ ಅನುಪಲ್ಲ ॥ ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು । ದಾಸನೆಂದು ತುಳಸಿಮಾಲೆ ಧರಿಸಿ ॥ ಬೇಸರಿಲ್ಲದೆ ಅವರ ಕಾಡಿಬೇಡಿ ಬಳಲಿಸುತ । ಕಾಸುಘಳಿಸುವ ಪುರುಷ ಹರಿದಾಸನೇ ॥ ॥ ೧ ॥ ಡಂಬಕದಿ ಹರಿಸ್ಮರಣೆಮಾಡಿ ಜನರ ಮುಂದೆ । ಸಂಭ್ರಮದಿ ತಾನುಂಬೊ ಊಟಬಯಸಿ ॥ ಅಂಬುಜೋದ್ಭವ ಪಿತನ ಆಗಮಗಳರಿಯದೆ । ತಂಬೂರಿಯ ಮೀಟಿದವ ಹರಿದಾಸನೇ ॥ ೨ ॥ ಯಾಯಾವರನೆಮಾಡಿ ವಿಪ್ರರಿಗೆ ಮೃಷ್ಟಾನ್ನ । ಪ್ರೀಯದಲಿ ತಾನೊಂದು ಕೊಡದ ಲೋಭೀ ॥ ಮಾಯಸಂಸಾರದಲಿ ಮಮತೆ ಹೆಚ್ಚಾಗಿಟ್ಟು । ಗಾಯನವ ಮಾಡಿದವ ಹರಿದಾಸನೇ ॥ ೩ ॥ ಪಾತಕನತೆರನಂತೆ ಪದಗಳ ತಾ ಬೊಗಳಿ। ಕೂಟಜನರಾ ಮನ ಸಂತೋಷಬಡಿಸಿ ॥ ಗೂಟನಾಮಗಳಿಟ್ಟು ಕೊಟ್ಟರಿಯಾ ತಾನೆನುತ । ತಾಟತೂಟಕ ಮಾಡಿದವ ದಾಸನೇ ॥ ೪ ॥ ನೀತಿಯಲ್ಲವನರಿತು ನಿಗಮವೇದ್ಯನ ನಿತ್ಯ । ವಾತಸುತನಲ್ಲಿಹನ ವರ್ಣಿಸುತಲೀ ॥ ಗೀತನರ್ತನದಿಂದ ಕೃಷ್ಣನ ಪೂಜಿಸುವ । ಪೂತಾತ್ಮ ಪುರಂದರಾದಾಸರಿವರಯ್ಯ ॥ ೫ ॥ ಶ್ರೀಃ ॥

## ೬೪. ರಾಗ ಕೇದಾರಗೌಳ, ಝಂಪೆತಾಳ.

ಶ್ರೀವದನ ಕುಮುದ ಚಂದ್ರ । ಸಚ್ಚಿದಾನಂದಮಯ । ಸೇವಕ ಪ್ರಿಯ ವಿಜಯಕೃಷ್ಣ ॥ ಪಲ್ಲ ॥ ದೇವಕಿನಂದನ ಸನಾತನ ಪರಬ್ರಹ್ಮ । ದೇವಾದಿದೇವ ಶ್ರೀಕೃಷ್ಣ ॥ ಅನುಪಲ್ಲ ॥ ಗೋಕುಲಾರಾಧ್ಯ ಗೋವಿಂದ ನಿತ್ಯಾತ್ಮವರ । ಗೋಕುಲ ಸುಗಂಭೀರ ಕೃಷ್ಣ ॥ ಗೋಕುಲಾನಂದಕರ ಬಾಲಭಾಸ್ಕರಕೋಟಿ । ಗೋಕುಲಮಯಾನಂತಕೃಷ್ಣ ॥ ೧ ॥ ಹಂಸವಾಹನ ಜನಕ ಗೌರೀಶನುತ ಪರಮ । ಹಂಸ ನಿರ್ದೋಷ ಶ್ರೀಕೃಷ್ಣ ॥ ಹಂಸ ಸಂಕುಲ ಮನೋಧ್ಯಾನಗಮ್ಯ ಮುಕುಂದ । ಹಂಸಲೋಚನ ರಾಮ ಕೃಷ್ಣ ॥ ೨ ॥ ನಾಗೇಂದ್ರಶಯನ ದಾಮೋದರ ಹೃಷೀಕೇಶ । ನಾಗೇಂದ್ರ

ವರದ ಶ್ರೀಕೃಷ್ಣ ॥ ನಾಗಾರಿವಾಹನ ನಿರಾಲಸ್ಯ ವಿಷ್ಣುದ್ರುತ । ನಾಗಾದಿ ಪದ್ಮ ಶ್ರೀಕೃಷ್ಣ ॥ ೩ ॥ ಗಾಂಗೇಯಚೇಲ ಭೂಷಿತ ಜಗದ್ಭರಿತ ಜಿತ । ಗಾಂಗೇಯಮಿತ್ರ ಶ್ರೀಕೃಷ್ಣ ॥ ಗಾಂಗೇಯ ನುತಿಪಾತ್ರ ಪರಮ ಪಾವನ ಗಾತ್ರ । ಗಾಂಗೇಯನಾಥ ಶ್ರೀಕೃಷ್ಣ ॥ ೪ ॥ ಉಡುಪಿ ಪುರವಾಸ ಸಜ್ಜನ ಘೋಷ ಪರಮೇಶ । ಉಡುರಾಜವದನ ಶ್ರೀಕೃಷ್ಣ ॥ ಜಡಜಮಾರ್ಗಣ ಕೋಟಿಲಾವಣ್ಯ ಮಧ್ವಪತಿ । ಕಡಗೋಲ ಪಿಡಿದ ಶ್ರೀಕೃಷ್ಣ ॥ ೫ ॥

೬೫. ರಾಗ ಪಂತುವರಾಳಿ, ಅಟತಾಳ.

ಸಾರಿರೋ ಡಂಗುರವ ॥ ಪಲ್ಲ ॥ ನಮ್ಮ । ಭಾರತಿರಮಣ ವಾಯುವೆ ಜಗದ್ಗುರುವೆಂದು ॥ ಅನುಪಲ್ಲ ॥ ಘೋರಿಡುತಲಿಪ್ಪ ಸಮುದ್ರವ ಲಂಘಿಸಿ । ಧಾರುಣಿಸುತೆಯ ದುಃಖವ ಕಳೆದು ॥ ಚೋರರಾವಣನಂದನಾನಳಗಾಹುತಿಯಿತ್ತು । ಶ್ರೀರಾಮಗೆರಗಿದಾತನೆ ಪ್ರಸಿದ್ಧನೆನುತ ॥ ೧ ॥ ಕುಶಲದಿ ಕುಂತಿಗೆ ಮಗನಾಗಿ ಭೀಮನೆ । ನಿಸಿ ಆ ಕೌರವ ಕಪಟದಲಿ ಕೊಟ್ಟ ॥ ವಿಷದ ಕಜ್ಜಾಯವ ತಿಂದು ಜೀರ್ಣಿಸಿಕೊಂಡ । ವಿಷಮ ಬಲಾಢ್ಯ ಮಾರುತಿ ಬದ್ಧವೆಂದು ॥ ೨ ॥ ಕಲಿಯುಗದಲಿ ಮಧ್ಯಗೇಹಾಭಿಧಾನದ । ತೌಳವ ಬ್ರಾಹ್ಮಣನಲಿಯವತರಿಸಿ ॥ ಒಲಿದು ಅಚ್ಯುತಪ್ರೇಕ್ಷಾಚಾರ್ಯರ । ಕೈಲಿ ಆಶ್ರಮವಗೊಂಡ ಪೂರ್ಣಪ್ರಜ್ಞನೆಂದು ॥ ೩ ॥ ಖೂಳ ಸಂಕರ ಕೊಲ್ಲಬೇಕೆಂದು ಕಪಟದಿ । ಕಾಳಾಹಿ ವೇಷದಿ ಬಂದಿರಲು ॥ ಕಾಲಪ್ರಳಯದ ಸಿಡಿಲು ಬಂದೆರಗಿದಂತೆ । ಕಾಲಿಂದ ತುಳಿದಾತನಸುವಗೊಂಡನುಯೆಂದು ॥ ೪ ॥ ಬಳಿಕಾ ಇಪ್ಪತ್ತೊಂದು ದುರ್ಭಾಷ್ಯಂಗಳ । ಕಳೆದು ವೇದಾಂತ ಶಾಸ್ತ್ರಗಳಲೀ ॥ ಉಳುಹಿದ ವೈಷ್ಣವ ಮತವನಿವಗೆ ನಮ್ಮ । ಸಲಹುವ ಮಧ್ವೇಶ ಕೃಷ್ಣ ಪ್ರಿಯನೆಯೆಂದು ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೬೬. ರಾಗ ಸೌರಾಷ್ಟ್ರ, ಆದಿತಾಳ.

ಮಂಗಳಂ ಜಯ ಮಂಗಳಂ ॥ ಪಲ್ಲ ॥ ಗೋಕುಲದಲಿ ಪೊಂಗೊಳಲೂದುತ । ಗೋವಳೆಯರ ಕೂಡೆ ನಲಿದಾಡುತ । ಶಕಟನ ತುಳಿದು

ಕಾಳಿಂಗನ ಮರ್ದಿಸಿ। ಭಕತರ ಪೊರೆವ ಗೋಪಾಲಕೃಷ್ಣಗೆ ॥ ೧ ॥ ಸರ ಸಿಜಮಿತ್ರ ಸುತನ ಕಾಯ್ದು । ಸುರಪತಿ ಸುತನ ಬಾಣದಿ ತರಿದು। ಚರಣ ನಖಾಗ್ರದಿ ಸ್ಪರ್ಶಿಸಿ ಶಿಲೆಯನ್ನು । ತರುಣಿಮಾಡಿದ ಶ್ರೀರಾಮ ಚಂದ್ರಗೆ ॥ ೨ ॥ ಶಂಕರಾಭರಣಶಯನನಿಗೆ। ಪಂಕಜೋದ್ಭವನ ಪಡೆದ ವಗೆ॥ ಸಂಖ್ಯೆ ಇಲ್ಲದ ದೈತ್ಯಸಂಘಗಳ ತರಿದಗೆ । ಶಂಖಚಕ್ರವ ಪಿಡಿದ ಶ್ರೀಕೃಷ್ಣಗೆ॥ ೩ ॥ ಶ್ರೀಃ ॥

## ೬೭. ರಾಗ ಪೂರ್ವಿ, ಅಟತಾಳ.

ಮಂಗಳ ಮುಖ್ಯಪ್ರಾಣೇಶಗೆ॥ ಪಲ್ಲ॥ ಜಯ। ಮಂಗಳ ವಾಯುಕುಮಾರಗೆ॥ ಅನುಪಲ್ಲ॥ ಅಂಜನದೇವಿಯ ಕಂದಗೆ ಮಂಗಳ। ಕಂಜಾಕ್ಷ ಹನುಮಂತಗೆ ಮಂಗಳ। ಸಂಜೀವನವ ತಂದಾತಗೆ ಮಂಗಳ। ಸಜ್ಜನ ಪರಿಪಾಲಗೆ ಮಂಗಳ ॥ ೧ ॥ ಅತಿ ಬಲವಂತ ಶ್ರೀಭೀಮಗೆ ಮಂಗಳ । ಪ್ರತಿಮಲ್ಲರ ಗೆಲಿದಗೆ ಮಂಗಳ। ಸತಿಯ ಶೀರೆಯ ಸೆಳೆವ ದೈತ್ಯನ ಕೊಂದ। ಕ್ಷಿತಿಯೊಳಪ್ರತಿಮಲ್ಲಗೆ ಮಂಗಳ ॥ ೨ ॥ ಸೀತಾದೇವಿಯ ಬಾಲಗೆ ಮಂಗಳ। ಶ್ರೀರಾಮರ ಬಂಟಗೆ ಮಂಗಳ ॥ ಗೋಪಾಲಕೃಷ್ಣನ ಪೂಜೆಯ ಮಾಡುವ। ಗುರು ಮಧ್ವಮುನಿರಾಯಗೆ ಮಂಗಳ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ಶ್ರೀವ್ಯಾಸರಾಯರ ಕೀರ್ತನೆಗಳು ಸಂಪೂರ್ಣ.

॥ ಶ್ರೀಕೃಷ್ಣಾರ್ಪಣಮಸ್ತು ॥



ಶ್ರೀಃ

॥ ಶ್ರೀಗುರುಭ್ಯೋ ನಮಃ ॥

॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಶ್ರೀವ್ಯಾಸರಾಯರ ಸುಳಾದಿಗಳು.

## ೧. ಸುಷುಪ್ತಿ ಸುಳಾದಿ.

**ಧ್ರುವತಾಳ** ॥ ಆಲದೆಲೆಯಲ್ಲಿ ಮಲಗಿದಂದು ನಿನ್ನ । ಲಾಲಿಯೆಂದು ಲಾಲಿಸಿದರಾರ್ರೈ । ಮತ್ತೆ ಕ್ಷೀರಾಬ್ಧಿಯಲೊರಗಿದಂದು ನಿನ್ನ । ತ್ರುವಿತ್ರುವ್ವಿಯೆಂದು ತೂಗಿದರಾರ್ರೈ । ಆ ಜಲಧಿಯ ದರ್ಭಶಯನದಲ್ಲಿ ನಿನ್ನ । ಜೋಜೋಯೆಂದು ಪಾಡಿದರಾರ್ರೈ ॥ ಆರವೆ ಸ್ತುತಿಮಾಡಿ ಪೊಗಳುವಂತೆ । ಶ್ರೀರಮಣ ನಿನ್ನ ಪಾಡಬಲ್ಲೆನೆ ॥ ನಾರದ ಮಹತೀಯ ಮಾಟುವಂತೆ । ಸ । ಮಾರಜ ಸ್ವರವೆತ್ತಿ ಪಾಡುವಂತೆ । ಶ್ರೀರಮಣ ನಿನ್ನ ಪೊಗಳಬಲ್ಲೆನೆ ನಾನು । ಕಣ್ಣುಮುಚ್ಚು ಪಾಲೂಡುವೆನೆಂತೆನೆ ಗೋಪಿ । ಕಣ್ಣುಮುಚ್ಚಿ ಕೃಷ್ಣ ಕಿವಿಯಾಂತು ನಗುತಿದ್ದ ॥ ೧ ॥

**ಮಟ್ಟೆತಾಳ** ॥ ತನ್ನುರದ ಮೋಹದರಸಿಯಾ । ಚೆನ್ನ ಚೆಲುವ ಸರಸಂಗಳಿಂದ । ಇನ್ನು ನಿದ್ರೆಬಾರದೆ । ನಿನ್ನ ಪೊಕ್ಕಳ ಬೊಮ್ಮನ ನಾಲ್ಕು ವದನದ ವೇದಘೋಷಣೆಗಳಿಂದ । ಇನ್ನು ನಿದ್ರೆಬಾರದೆ । ನಿನ್ನುದರದ ಜಗದುರುಪಿನಿಂದ ಇನ್ನು ನಿದ್ರೆಬಾರದೆ । ನಿನ್ನ ಭಕತರು ಕರೆವ ಚೀರಾಟದಿಂದ । ಇನ್ನು ನಿದ್ರೆಬಾರದೆ ॥ ಇಂತೆಂಬ ಗೋಪಿದೇವಿಯ ಮಾತಿಗೆ ಕೃಷ್ಣ ನಾಚಿ ಕಣ್ಣುಮುಚ್ಚಿದಾ ॥ ೨ ॥

**ರೂಪಕತಾಳ** ॥ ಶುಭಗುಣಂಗಳ ಕಣಿಯೆ ಜೋಜೋ । ಭಕತರ ಚಿಂತಾಮಣಿಯೆ ಜೋಜೋ । ಮುನಿಹೃದಯಾಂಬುಜ ಹಂಸ

ಜೋಜೋ। ಸರ್ವದೇವೋತ್ತಂಸನೆ ಜೋಜೋ। ಮುಕುತಿ ಕಾರಣ ಪುಣ್ಯ ನಾಮನೆ ಜೋಜೋ। ಶ್ರೀಕೃಷ್ಣ ವೈಕುಂಠ ಧಾಮನೆ ಜೋಜೋ॥ ೩॥

**ಝಂಪೆತಾಳ** ॥ ಪರಬೊಮ್ಮನೆ ಯೆನ್ನ ತಮ್ಮ ಬಾಯೆಂಬ। ಅಜನ ತಂದೆಯೆನ್ನ ಅಪ್ಪಾ ಬಾಯೆಂಬ। ಹರಿಯ ನೋಡೆಲೊ ಎನ್ನ ಮರಿಯೆ ಮುದ್ದುಯೆಂಬ। ಗೋಪಿದೇವಿಯ ಸೋಂಪು ತಾನೆಂತೊ। ಇದಕೆ ಬಂದಪ್ಪಿ ಮುದ್ದಿಸಿ ಒಲಿವ। ಮುದ್ದು ವೈಯ ಕೃಷ್ಣ ನಿನ್ನ ದಯೆ ತಾನೆಂತೆಂತೊ॥ ೪॥

**ತ್ರಿಪುಟತಾಳ** ॥ ಶ್ರೀಲೋಲುಪಲಾಲಿ ಗೋಪಾಲಕ ಜಾರ ಲಾಲಿ। ಮೂಲಕಾರಣ ಮುಕ್ತರೊಡೆಯನೆ ಲಾಲಿ। ಗೋಪಾಲ ಬಾಲ ಶ್ರೀಕೃಷ್ಣಯ್ಯನೆ ಲಾಲಿ॥ ೫॥

**ಅಟತಾಳ** ॥ ಒಮ್ಮೆ ನೆನೆವರ ಋಣದ ಚಿಂತೆ। ಆವಾಗ ಭಕತರು ಕರೆದಾರೆಂಬ ಚಿಂತೆ। ನಿರುಪಾಧಿಕ ಭಕ್ತರ ಹಂಗಿನ ಚಿಂತೆ। ತನ್ನ ನಿಜವೆಲ್ಲಿ ಅರಿವರೊ ಎಂಬ ಚಿಂತೆ। ಇನಿತು ಚಿಂತೆ ಯುಳ್ಳ ನಿನಗೀ ನಿದ್ರೆ। ಇನ್ನು ಬಾರದೆ ಯೆಂದರೆ ಕೃಷ್ಣ ನಗುವಾ॥ ೬॥

**ಏಕತಾಳ** ॥ ಬಾಲಲೀಲೆಯು ಜೇಕಾದರೆ। ಮೂಲೋಕ ಬಾಯೊಳು ತೋರುವನೆ॥ ಮಕ್ಕಳಾಟಕೆ ಬಲ್ಲಿದನಾದಡೆ। ರಕ್ಕಸರಿಗೆಲ್ಲ ಕಕ್ಕಸನಪ್ಪನೆ। ಚಿಕ್ಕತನವು ನಿನಗಳವಡುವುದೆ। ಯೆನ್ನ। ದಿಕ್ಕುದೆಸೆಯು ಶ್ರೀಕೃಷ್ಣ ರಕ್ಷಿಸೊ ತಂದೆ॥ ೭॥

**ಜತೆ** ॥ ಚೆನ್ನಕೃಷ್ಣನ ಮುದ್ದಿಗೆ ಗೋಪ। ಕನ್ನೆಯರೆಲ್ಲರು ತನ್ಮಯವಾಗಿಪ್ಪರು॥ ೮॥ ಶ್ರೀಃ॥

## ೨. ಶ್ರೀದೇವಿ ಸುಳಾದಿ.

**ಧ್ರುವತಾಳ** ॥ ಶ್ರೀದೇವಿಯ ಶ್ರೀಪಂತ ಸಿಂಧೂರಗಳಿಂ ಅತಿ ಅತಿ ರಂಜಿತವಾದ। ಶ್ರೀದೇವಿಯ ಕಸ್ತೂರಿ ತಿಲಕದಿಂ ಅತಿ ಅತಿ ವಾಸಿತ ವಾದ। ಶ್ರೀಕುಚಕುಂಭ ಕುಂಕುಮದಿಂ ಅತಿ ಅತಿ ಶೋಭಿತವಾದ। ಶ್ರೀದೇವಿಯ ಕರಕಂಜ ಸುದೇಶೆಗಳಿಂದ। ಅತಿ ಅತಿ ಅಂಕಿತವಾದ।

ಶ್ರೀವನಜಭವಾದಿ ಹೃತ್ಸರೋವರದಿಂ ಸರಸಿಜದಂತೆ ನಿಲಿಸಿಪ್ಪ । ಸನಕಾದಿ ಹೃದಯಾಂಬುಜದಿಂ ಹಂಸೆಯಂತೆ ನಲಿಯುತಿಪ್ಪ । ಮನುಜೋತ್ತಮರ ಹೃದಯಾಂಬರದಿಂ ಮಿಂಚಿನಂತೆ ಹೊಳಹೊಳೆವ । ಶಿರಿಕೃಷ್ಣನ ಚರಣಕಮಲ ಶರಣಾಯೆನಗೆಂದೆಂದು ॥ ೧ ॥

**ಮಟ್ಟೆತಾಳ** ॥ ನಿಧಿಯ ಮೇಲೆ ಇದ್ದು ನಿಧಿಯನರಿಯದಂತೆ । ತನ್ನ ಕಂಠಮಣಿಯ ತಾ ಮರೆದಂತೆ । ಕಣ್ದೆರೆಯದ ಹಸುಳೆ ತಾಯನರಿಯದಂತೆ । ಎನ್ನಲಿ ಹೊಂದಿಪ್ಪ ನಿನ್ನನರಿಯದಂತೆ । ನಿನ್ನ ತೋರಿದರೆನಗೆ ನಿನ್ನ ದಾಸರು ಶಿರಿಕೃಷ್ಣ ॥ ೨ ॥

**ರೂಪಕತಾಳ** ॥ ಜನನಮರಣ ಮಾರ್ಗದಲ್ಲಿ ತೊಳಲಿ ಬಳಲಿ ಸ್ವರ್ಗ । ನರಕಕ್ಕೇರಿ ಮಮತೆಯೆಂಬ ಭಾರವ ಪೊತ್ತು । ಬಳಲಿ ತಾಪತ್ರಯ ತಾಪದಿಂ ಬೆಂದೆನಾಗಿ । ನಖಚಂದ್ರಿಕೆ ಗಂಗಾ ಶೀತಕರದಿಂ ತಂಪಾದ । ಶಿರಿಕೃಷ್ಣನ ಚರಣ ನೆಳಲು ನೆಲೆಮನೆಯಾಯಿತು ॥ ೩ ॥

**ತ್ರಿಪುಟತಾಳ** ॥ ಕಾಮಿತ ಫಲವೀವ ಬಹುಶಾಖೆಗಳಿಂ। ಕೋಮಲಕರ ಚರಣಯುಗಳ ಪಲ್ಲವದಿಂ । ಹೊಸ ಕುಸುಮದಿಂದಾದ ಮಕರಂದದಿಂ । ಶ್ರೀಸತಿ ಕಲ್ಪಲತಾ ವಿಲಾಸಗಳಿಂ । ಶುಕ ಮುಖ್ಯ ದ್ವಿಜಗಣದಿಂದ ಸೊಗಸಿಪ್ಪ । ಶಿರಿಕೃಷ್ಣ ಕಲ್ಪತರುವಾ ಸಾರಿದೆವಯ್ಯ ॥ ೪ ॥

**ಅಟತಾಳ** ॥ ಕರುಣಾ ಜಲದಿಂ ಚರಣಾಬ್ಜ ಗಾಳಿಯಿಂ । ವರನಾಭಿ ಸುಳಿಯಿಂ ಪರಮಹಾಸಕೂಲದಿಂ । ಮೆರೆವ ಅಗಾಧ ಶ್ರೀಕೃಷ್ಣನ ಸರೋ । ವರದಿ ಮುಳುಗಿ ಕಳದೆನೊ ಭವತಾಪವಾ ॥ ೫ ॥

**ಆದಿತಾಳ** ॥ ಜಿಜ್ಞಾಸುವಿಗೆ ಜ್ಞಾನಕಾರಣ । ಜ್ಞಾನಿಗೆ ಅಪರೋಕ್ಷ ಜ್ಞಾನಸಾಧನ । ಅಪರೋಕ್ಷಿಗೆ ಅಧಿಕಾನಂದಜನಕ । ಮುಕ್ತಿಗೆ ತಾನೆ ಫಲರೂಪ । ಶಿರಿಕೃಷ್ಣನ ಪಾದಸೇವೆ । ಇದರ ತೂಕಕ್ಕೆ ಸಾಕೆ ಕೈವಲ್ಯ ॥ ೬ ॥

**ಏಕತಾಳ** ॥ ಪಾಪಾಟವಿಗೆ ದಾವಾನಲ। ಕಾಮಾನಿಲ ಕಾಲಾಂಬುದ । ಮೋಹಾಂಬುದ ಝಂಝಾನಿಲ । ಕೋಪಾನಿಲ ಭುಜಂಗಮ । ಶಿರಿಕೃಷ್ಣನ ಪದಸೇವೆ ಭವಭುಜಂಗ ಗರುಡಾ ॥ ೭ ॥

ಜತೆ ॥ ಶಿರಿಕೃಷ್ಣ ನಿನ್ನ ಪಾದನಖ ಚಂದ್ರಿಕೆಯಲ್ಲಿ। ಸಾಕೆನ್ನ ಚಿತ್ತ ಚಕೋರಾವಾದ ಧರ್ಮ ॥ ೮ ॥ ಶ್ರೀಃ ॥

## ೩. ಕಾಮ ಸುಳಾದಿ.

ಧ್ರುವತಾಳ ॥ ಕಾಮವೆಂಬ ಹೆಚ್ಚಿನ ಕಾಡುಗಿಚ್ಚೊಂದು ಕಡೆಯಲ್ಲೆನ್ನ ಸುಡುತಲಿದೆ । ಕ್ರೋಧವೆಂಬ ಹೆಬ್ಬುಲಿ ಹಸಿದು ಒಂದು ಕಡೆಯಲೆನ್ನ ತಿನ್ನುತಿದೆ । ಲೋಭವೆಂಬ ಮಹರಕ್ಕಸನೊಂದು ಕಡೆಯಲೆನ್ನ ಹೀರುತ್ತೈದಾನೆ । ಮೋಹವೆಂಬ ಕಗ್ಗತ್ತಲೆಯು ಕವಿದು ದಿಕ್ಕುದೆಶೆಯೇನೂ ತಿಳಿಯದು । ಮದವೆಂಬ ಮದಸೊಕ್ಕಿದ ಕಾಡಾನೆ ಒಂದು ಕಡೆಯಲೆನ್ನ ಸೀಳುತಿದೆ । ಮತ್ಸರವೆಂಬ ಮಹಾವಿಷದ ಚೇಳೊಂದು ಕಡೆಯಲೆನ್ನ ಊರುತಿದೆ। ಈ ಪರಿಯ ಭಯವೆಂಬಡವಿಯಲಿ ನಾನಾಪರಿ ಶತ್ರುಗಳೊಳಗಾದೆ। ಶ್ರೀಪತಿ ಪರಮ ದಯಾನಿಧೇ ದೀನನಾಥನೆನ್ನೊಡೆಯ ರಕ್ಷಿಸು ಶಿರಿಕೃಷ್ಣ ॥ ೧ ॥

ಮಟ್ಟತಾಳ ॥ ಆಗದ ಹೋಗದ ಮನೆಮನೆವಾರತೆ ಬೇರೊಬ್ಬ। ಲೋಗರಿಗಾಗಿ ಹೊತ್ತು ಭವಾಟವಿಯಲ್ಲಿ । ರಾಗವೆಂಬ ಘನ ತೃಷೆಯಿಂದ ಬಾಯೊಣಗಿ । ಭೋಗವೆಂಬ ಮೃಗತೃಷ್ಣೆಗೋಡುತ। ಬೇಗೆಯಿಂದ ಬಿದ್ದೆನೊ ನರಕಕೂಪದಲಿ । ನಾಗಶಯನ ಯೆನ್ನನುದ್ಧರಿಸೊ ಶಿರಿಕೃಷ್ಣ ॥ ೨ ॥

ರೂಪಕತಾಳ ॥ ಇಂದ್ರಿಯಂಗಳೆಂಬ ಕಳ್ಳರೈವರು। ಬಂಧಿಸಿ ತಮ್ಮ ವಿಷಯಕೊಯ್ದೆನ್ನ। ಕಂದಿಸಿ ಜ್ಞಾನವೆಂಬ ದೃಷ್ಟಿಯಾ । ಯೆಂದೆಂದಿನ ಧರ್ಮಧನವನೊಯ್ದರು ಬಂಧಿಸಿ। ಇಂದಿರೇಶ ಲೋಕಪತಿ ಶಿರಿಕೃಷ್ಣ ಯೆನ್ನ ತಂದೆ ॥ ೩ ॥

ಝಂಪೆತಾಳ ॥ ನಾನಾ ಗರ್ಭವೆಂಬ ಕಂಪಿನಲೊಮ್ಮೊಮ್ಮೆ। ಹೀನೋಚ್ಚ ಜನ್ಮವೆಂಬ ತಗ್ಗು ಮಿಟ್ಟೆಯಲೊಮ್ಮೆ । ಸ್ವರ್ಗವೆಂಬ ಪರ್ವತಾಗ್ರದಲೊಮ್ಮೊಮ್ಮೆ । ದುರ್ಗತಿಯೆಂಬ ಕಮರಿಯಲಿ ತಾನೊಮ್ಮೆ। ಬಂದೆ ಭವಾಟವಿಯಲ್ಲಿ ನಿನ್ನ ಪಾದಾರ। ವಿಂದದ ನೆಳಲಲಿರಿಸೆನ್ನ ಶಿರಿಕೃಷ್ಣ ॥ ೪ ॥

**ತ್ರಿಪುಟತಾಳ** ॥ ಹರಿದಾಸರನೆರವಿಲ್ಲದೆ । ಹರಿಸೇವೆಯೆಂಬ ಪಥವ ಕಾಣದೆ । ಹರಿಪದವೆಂಬ ಜನುಮ ಭೂಮಿಯು । ಪರಿದು ದೂರದಲ್ಲಿ ತಪ್ಪಿ । ಮರುಳಾದೆ ಭವಾಟವಿಯಲ್ಲಿ । ಶಿರಿಪತಿ ನಿನ್ನ ಸೇರಿಸೊ ಶಿರಿಕೃಷ್ಣ ॥ ೫ ॥

**ಅಟತಾಳ** ॥ ಮಾಯೆಯೆಂಬ ದುಷ್ಟರಾಯ । ಮಾನವೆಂಬ ಬಿನುಗು ಮಂತ್ರಿ । ಇಂದ್ರಿಯಂಗಳೆಂಬ ತಿಂದೋಡುವ ಪರಿವಾರ । ಬಿಗಿದು ಕಟ್ಟಿಯೆನ್ನ ಹಗೆಗಳಿಗಿತ್ತರು । ಕಾಮಾದಿ ಹಗೆಗಳ ಶಿಕ್ಷಿಸಿ ರಕ್ಷಿಸಯ್ಯ ಶಿರಿಕೃಷ್ಣ ॥ ೬ ॥

**ಆದಿತಾಳ** ॥ ತಾಪತ್ರಯವೆಂಬ ದಾವಾನಲದಿಂದ । ಪಾಪರ ಸಂಗವೆಂಬ ವಿಷವೃಕ್ಷದಿಂದಾ । ಕಾಪಥವೆಂಬ ಬಹು ತಪ್ಪುಗತಿಗಳಿಂದ । ಕೋಪವೆಂಬಟ್ಟುವ ಕಾಳೋರಗದಿಂದ । ಈ ಪರಿಯುಲಿ ನೊಂದೆ ಭವಾಟವಿಯಲಿ । ನೀ ಪಾಲಿಸಲುಬೇಕೆನ್ನನು ಶಿರಿಕೃಷ್ಣ ॥ ೭ ॥

**ಜತೆ** ॥ ಅತ್ತಿತ್ತ ಸುತ್ತಿ ಭವಾಟವಿಯಲಿ ನೊಂದೆ । ಇತ್ತಬಾರೆಂದು ನಿನ್ನ ಹತ್ತಿರಿರಿಸೊ ಸಿರಿಕೃಷ್ಣ ॥ ೮ ॥ ಶ್ರೀಃ ॥

## ೪. ಹರಿಚರಿತೆಶ್ರವಣ ಸುಳಾದಿ.

**ಧ್ರುವತಾಳ** ॥ ಹರಿಚರಿತೆಶ್ರವಣ ದುರಿತ ತುಚ್ಛವನ । ಹರಿನಾಮ ಕೀರ್ತನೆ ಭವರೋಗಕ್ಕೆ ಸಿದ್ಧೌಷಧ । ಹರಿಚರಣ ಸ್ಮರಣ ಮುಕ್ತರೊಳಗರ್ಪಣ । ಇಂತು ಹರಿಸೇವೆ ಅನಂತ ಫಲಸಾಧನ । ಇಂತೆಂಬುದೊಂದು ಪೆರ್ಮೆಗೆ ಹರಿಸೇವೆ ಫಲರೂಪ ಶ್ರವಣವೆ ಶುಭದ ಬೆಳಸು । ಕೀರ್ತನೆಯೇ ಅಸೀಮ ಹೆಚ್ಚಿಗೆ । ಶ್ರವಣವಚ್ಛಸುಖ ತೊಟ್ಟಿಲು ಯೆಂಬದನುಭವ ಸಿದ್ಧಾ । ಶಿರಿಕೃಷ್ಣನ ಪಾದ ಸೇವೆಯುಲ್ಲದಿಲ್ಲ ॥ ೧ ॥

**ಮಟ್ಟತಾಳ** ॥ ನೆನಹಿನ ಲೇಶಮಾತುರದಿಂದಾ । ಘನಸುಖಮಯನಾಗಿ ಇಪ್ಪೆನಾವಾಗ । ತನುಭವವಳಿದು ಮೌನಿಗಳಂತೆ ಮೈಮರೆದು ಕು । ಜನಾಚಾರ ಬಳಿದು ಯೆಲೆ ನಿನ್ನನನವರತ । ನೆನೆವ ಭಕತರನು ಸುಖವಿನ್ನೆಂತೊ ಶಿರಿಕೃಷ್ಣಯ್ಯಾ ॥ ೨ ॥

**ತ್ರಿಪುಟತಾಳ** ॥ ಪುತ್ರಮಿತ್ರಕಳತ್ರ ವರ್ಗದಿಂದಾ । ದೇಹ ಕರ್ಮ ಜ್ಞಾನೇಂದ್ರಿಯಗಳಿಂದ । ಚಿತ್ತ ಬುದ್ಧಿ ಮನೋಹಮ್ಮೊಗ ದಿಂದ । ಪ್ರಾಣದಿಂದಾ ತನ್ನಾತ್ಮತನ್ನಿಂದ । ನೀನೆ ಪ್ರಿಯನಾಗಿ ಕೃಷ್ಣ ನಿನ್ನಯ ನೆನಹಿನ । ಬೇರೆ ಪರಮ ಸುಖವುಂಟೆ ॥ ೩ ॥

**ಅಟತಾಳ** ॥ ಆ ನಿನ್ನ ಧನ್ಯನಲ್ಲ ಮತ್ತೇನು ಕೊಂಡೆನು ಕೊಂ ಡೆನಗೆ । ಆರೇನು ಕಾರಣವಯ್ಯ । ನಾನಾ ದುರಿತ ತಾನೆ ಬಂದುದಲ್ಲ । ಶ್ರೀನಾಥ ಶಿರಿಕೃಷ್ಣನ ತಾನೇನ ನೆನೆವಿಗೆ ಬಂದನಾಗಿ ॥ ೪ ॥

**ಆದಿತಾಳ** ॥ ಮರಹೆ ಯೆಡರು ಮರಹೆ ಬಡತನ । ಮರಹೆ ಅವ ಮಾನವು ಮರಹೆ ನಷ್ಟ । ಮರಹೆ ಅಹಂಕಾರ ಮರಹೆ ನರಕ । ಮರಹೆ ಶತ್ರು ಮರಹೆ ಮೃತ್ಯು । ಮರೆಯದೆ ನಿನ್ನ ನೆನೆವಂತೆ ಮಾಡೊ ಶಿರಿಕೃಷ್ಣ ॥ ೫ ॥

**ಜತೆ** ॥ ಶಿರಿಕೃಷ್ಣ ನೆನಹಿನ ಸುಖವು ಲವ ಬೇಕೆಂಬವನೆ । ಮುಕುತಿಯ ಸುಖವನೆಂತೇನು ॥ ೬ ॥ ಶ್ರೀಃ ॥

## ೫. ದೃಢಭಕ್ತಿ ಸುಳಾದಿ.

**ಧ್ರುವತಾಳ** ॥ ತಾಯಿಯೆಂಬೆನೆ ನಿನ್ನ ಧ್ರುವನ ತಾಯಿ ನಿನ್ನಂತೆ ಕಾವಳೆ । ತಂದೆಯೆಂಬೆನೆ ನಿನ್ನ ಪ್ರಹ್ಲಾದನ ತಂದೆ ನಿನ್ನಂತೆ ಕಾದನೆ । ಭ್ರಾತೃವೆಂಬೆನೆ ನಿನ್ನ ವಿಭೀಷಣನ್ನ ಭ್ರಾತರ ನಿನ್ನಂತೆ ಕಾದನೆ । ಭರ್ತೃವೆಂಬೆನೆ ನಿನ್ನ ಪಾಂಚಾಲಿಯ ಭರ್ತರು ನಿನ್ನಂತೆ ಕಾದರೆ । ಪುತ್ರನೆಂಬೆನೆ ನಿನ್ನ ಉಗ್ರಸೇನನ ಪುತ್ರ ನಿನ್ನಂತೆ ಕಾದನೆ । ಮಿತ್ರ ಯೆಂಬೆನೆ ನಿನ್ನ ಗಜೇಂದ್ರ ಮಿತ್ರರು ನಿನ್ನಂತೆ ಕಾದರೆ । ಅವಿನಿಮಿತ್ತ ಬಂಧುವೊ ಮೋ । ಣಾವ ಕರುಣಾಸಿಂಧುವೋ । ಶಿರಿಪತಿ ಶಿರಿಕೃಷ್ಣ ನಿನ್ನ ಭಕತರಲಿ । ನಂಟುತನ ಹೊಸಪರಿಯಾಯಿತಯ್ಯಾ ॥ ೧ ॥

**ಮಟ್ಟತಾಳ** ॥ ದಾನಿಗಳರಸಗೆ ದೈನ್ಯಬಲಿ ಲಕ್ಷ್ಮಿಪತಿಗೈದೆ ಯಜ್ಞಭಿಕ್ಷತೆ ತಿರುಪೆ । ಕೈವಲ್ಯಪತಿಗೆ ಆವಿನ ಬಂಧನ । ಲೋಕ ಗುರುವಿಂಗೆ ಪುಕ್ಕಟವೆ । ಗೋಪಿಯರೊಳು ಈಸುವಿನೋದವು ನಿನ್ನ

ಭಕತರಿಗಾಗಿಯೆ । ಶ್ರೀಪತಿ ಶಿರಿಕೃಷ್ಣ ಈಸುವಿನೋದವು ನಿನ್ನ ಭಕತರಿಗಾಗಿ ॥ ೨ ॥

**ರೂಪಕತಾಳ** ॥ ಹಿಂದೆ ಪೋಂಗೊಳಲೂದೊಂದೊಂದು । ಧಂದಾಗೋಪಾಲ ಮೂರುತಿಯೆ ಯೆಂದು । ಒಂದುಬಾರಿ ನೆನೆದ ಕಂಬುಜಗೆ ಮುಕುತಿಯುನಿ । ತ್ತೆಂಪಡೆ ನಾನಿನ್ನ ನೆನೆವುದ ಬಿಡೆ ಶ್ರೀಕೃಷ್ಣ ಯೆಂದೆಂದಿಗೂ ಬಿಡೆ ॥ ೩ ॥

**ಝಂಪೆತಾಳ** ॥ ಆಳು ನಾನಿನ್ನಾಳು ನಿನ್ನಾಳು ನಾನು । ನೀನು ತಂದೆ ನಿನ್ನ ಕಂದ ನಾನು । ಶರಣ್ಯ ನಾನಿನ್ನ ಶರಣಾಗತ ನಾನು । ಪೋವನೋವಿತ್ತಿಂತು ಕಾವಯರ್ಾರಿನ್ನು । ಶ್ರೀಪತಿ ಶಿರಿಕೃಷ್ಣ ನೀಯೆನ್ನ ಸಲಹಬಹುದೋ ॥ ೪ ॥

**ತ್ರಿಪುಟತಾಳ** ॥ ಕಂಸಾರಿಯೆಂದು ಸಂಸಾರ ದಾಟುವೆನೂ । ಶಿರಿಪತಿಯೆಂದು ಪಾಪಂಗಳಟ್ಟುವೆನೂ । ಕಂಜನಾಭಾಯೆಂದಂಜಿಸುವೆ ಜವನವರ । ಶಿರಿಪತಿ ಶಿರಿಕೃಷ್ಣ ನಿನ್ನ ದಾಸರ ದಾಸನಾನು ॥ ೫ ॥

**ಅಟತಾಳ** ॥ ಹಿಂದೆ ಅಸುರರ ಬಲಿದೆ ಬಳಲಿಸಿದೆ । ವೃಂದಾರಕರಿಂಗೆಲ್ಲ ನೀ ಸುಧೆಯನೆರೆದೆ । ಆವಾವ ಪರಿಯಲ್ಲಿ ಅಸುರರ ಬಳಲಿಸಿದೆ । ದೇವರೆಲ್ಲರನೋವೆ ಕಾಯ್ದೆ । ಆಗವೋಕ್ತದ ದೇವಂಗಳಿಗೆಲ್ಲ ನೀನೊಬ್ಬನೆ ತೆತ್ತಿಗನಲ್ಲವೆ । ಶ್ರೀಕೃಷ್ಣ ಆವಾಗ ॥ ೬ ॥

**ಏಕತಾಳ** ॥ ಆವಾ ಕಾಲದಲಿ ಆವಾ ದೇಶದಲಿ । ಶ್ರೀಕೃಷ್ಣ ಕಾವಂತೆ । ಬಂಧುಜನ ಕಾಯಬಲ್ಲುದೆ ಶಿರಿಪತಿ ಶಿರಿಕೃಷ್ಣ ಆವಾವ ಕಾಲದಲಿ ॥ ೭ ॥

**ಜತೆ** ॥ ಅನಿಮಿತ್ತ ಬಂಧು ಈ ನಮ್ಮ ಶ್ರೀಕೃಷ್ಣ । ಎಂದೆಂದಿಗೂ ಶತ್ರು ಅಸುರರ್ಗೆ ॥ ೮ ॥ ಶ್ರೀಃ ॥

## ೬. ಭಕ್ತಾಧೀನ ಸುಳಾದಿ.

**ಧ್ರುವತಾಳ** ॥ ನಾನಾ ಯಜ್ಞದ ಹವಿರ್ಗಳಿಂದ ಕದ್ದ ಬೆಣ್ಣೆಯು ಸವಿಯೆ । ಶ್ರೀನಾರಿಮಾಡುವ ಪೂಜೆಗಳಿಂದ ಒಪ್ಪಿದಿ ಅವಲೊಳ್ಳಿತೆ ।

ಏನೆನ್ನ ಬಾರದೆ ನಿನ್ನಾನಂದಕ್ಕೆ ಏದುರನೌತಣ ಮಿಗಿಲೇನಯ್ಯ । ಮಾನಸ ವಚನಕ್ಕಗೋಚರವಾದ ಆನಂದ ನೀನಲ್ಲದೆ । ಏನಯ್ಯ ನಿನ್ನ ಭಕತವತ್ಸಲತನ । ಎಲೆ ಎಲೆ ಕೃಷ್ಣಯ್ಯ ನೀನೆ ಬೇಡಿಕಾಡಿ ಯಶೋದೆಯ ಕಯ್ಯುಗವೆರಸಿಕೊಂಡು ನಲಿದಾಡುವೆ ಅಯ್ಯ ॥ ೧ ॥

**ಮಟ್ಟತಾಳ** ॥ ಶ್ರೀವರಪರಾಕು ಚಿತ್ರವಧಾರೆಂದು ನಿನ್ನ । ಆವಾಗಲಿ ಅಜಭವಾದಿ ದೇವರೋಲೈಸಲೂ । ದೇವ ಸಾರ್ವಭೌಮ ನೀನುಗ್ರಸೇನಂಗೈದೆ। ವಿಜಯನ ಸಮುಖವದೆಂದು । ಈ ದಾವಲೀ ಲೆಯೋ ನಿನಗೆ ಭಕತವತ್ಸಲ ಕೃಷ್ಣಾ ॥ ೨ ॥

**ಝಂಪೆತಾಳ** ॥ ಮುನಿಮನಂಗಳು ತೊಳಲಿ ಕಾಣವು । ಅನಂತ ವೇದದ ನೆರಹುಗೂಡಿ ನಿನ್ನ । ಚಿನುಮಯನೆ ನೀನು ಕುಬುಜೆಯನ ರಸಿಕೊಂಡೇಕೆ ಹೋದೆ । ವನಿತೆ ಸಿರಿಯೆಂಬ ಘನತೆಯನು ಬಿಟ್ಟು । ನೆನೆವರಲಿ ಯೆಳೆಗಂದಿತನವೀಸು । ಘನವಲ್ಲವೆ ಎಲೆ ಎಲೆ ಶ್ರೀಕೃಷ್ಣ ॥ ೩ ॥

**ಅಟತಾಳ** ॥ ನಿನ್ನ ಮೂರುತಿಯನ್ನು ನೋಡಿದಡಂ । ನಿನ್ನ ನಾಮವ ನೆನೆದಡಂ। ಘನ್ನ ಭವಬಂಧ ಪರಿವುದು । ಇಂತೆನ್ನೆ ಕಟ್ಟಿದ ಳೆಂತೊ ನಿನ್ನ ಗೋಪಿ। ಚೆನ್ನಶ್ರೀಕೃಷ್ಣ ವಿನೋದಿಗಳರಸ ॥ ೪ ॥

**ಏಕತಾಳ** ॥ ದ್ವಾರಾ ಕಾಶ್ಯಪಿ ತತ್ರದ್ವಾರದಿ ದ್ರುಹಿಣಾದ್ಯರು ನಿನ್ನನೋಲೈಸಲು । ಪ್ರಹರಿಯ ಕಾಯ್ದೆಂತೊ ಮಹಾಮಹಿಮ । ನೀಪ ರೀಕ್ಷಿತಗೆ ಪ್ರಹರಿಯ ಕಾಯ್ದೆಂತೊ । ಮಹಾಮಹಿಮ ಭಕತರ ಆರಭಾ ರವ ವಹಿಸುವ ವಕ್ಕಲಿಗೆ ನಮೋ ನಮೋ ಕೃಷ್ಣಯ್ಯ ॥ ೫ ॥

**ಜತೆ** ॥ ಚಕ್ರವರ್ತಿ ಶಾಲ್ಯನ್ನ ಶಿಶುಗಳಿಗೆಂತೆಂತು । ಭಕತರಿಗೆ ಸುಲಭನು ನಮ್ಮ ಕೃಷ್ಣಯ್ಯ ॥ ೬ ॥ ಶ್ರೀಃ ॥

## ೭. ವ್ಯಾಪ್ತಿ ಸುಳಾದಿ.

**ಧ್ರುವತಾಳ** ॥ ತಂದೆಯಾಗಿ ತಾಯಿಯಾಗಿ । ಇಂದಿರೇಶನೆ ಎನಗೆ ಬಂಧುವಾಗಿ ಬಳಗವಾಗಿ । ಸಿಂಧುಶಯನನೆ ॥ ಹಿಂದಾಗಿ ಮುಂದಾಗಿ ಮುಕುಂದನೆ । ಎನಗೆ ಸ್ವಾಮಿಯಾಗಿ ಭೂಮಿಯಾಗಿ

ರಕ್ಷಸಾಂತಕನೆ । ಗುರುವಾಗಿ ದೈವವಾಗಿ ದೇವೋತ್ತಮನೆ । ಎನಗೆ ವಿದ್ಯೆಯಾಗಿ ಬುದ್ಧಿಯಾಗಿ ವಿದ್ಯಾಪತಿಯೆ । ದಿಕ್ಕಾಗಿ ದೆಶೆಯಾಗಿ ರಾಮಚಂದ್ರನೆ । ಎನಗೆ ಇಹವಾಗಿ ಪರವಾಗಿ ಶ್ರೀಕೃಷ್ಣನೆ ॥ ೧ ॥

**ಮಟ್ಟತಾಳ** ॥ ಜೊಮ್ಮನಮ್ಮ ರುಗ್ಮಿಣಿರಾಣಿ ದೇವಿಯೂ । ಪೆರ್ಮೆಯ ಅಜನು ಹೆಮ್ಮಗ । ಹಮ್ಮಿನ ರುದ್ರ ಮೊಮ್ಮಗ । ಸುಮ್ಮನ ಸರೆಲ್ಲ ಪರಿವಾರ । ನಮ್ಮ ಸ್ವಾಮಿ ಕೃಷ್ಣಯೆಂದರೆ । ಪೆರ್ಮೆಯಿಂದೊಲಿದಿಲ್ಲವೆ ॥ ೨ ॥

**ರೂಪಕತಾಳ** ॥ ದೂರದೊಳ್ಕಿಂದೊಮ್ಮೆ ಗೋವಿಂದ ಗೋವಿಂದ । ಅನಾಥ ಬಂಧುವೆ ದ್ವಾರಕಾವಾಸಿಯೆಂದು । ಚೀರಿದ ದ್ರೌಪದಿಗೆ ಸಾರಿದೆ ನಾನಿನ್ನ ನಂಬಿದೆ ಎಂದು ಶ್ರೀಕೃಷ್ಣ ಚೀರಿದ ದ್ರೌಪದಿಗೆ ॥ ೩ ॥

**ಅಟತಾಳ** ॥ ಅಂದು ವಿಷ್ಣು ಇಂದು ವಿಷ್ಣು । ಎಂದೆಂದು ವಿಷ್ಣುತಾನೆ । ಅತ್ತ ವಿಷ್ಣು ಇತ್ತ ವಿಷ್ಣು ಎತ್ತಿತ್ತ ವಿಷ್ಣುತಾನೆ । ಸ್ವಪ್ನ ಸುಷುಪ್ತಿ ಜಾಗ್ರತೆಲಿ ವಿಷ್ಣುತಾನೆ । ಸರ್ವಯಜ್ಞ ಸರ್ವಶಕ್ತಿ । ಸಾಧು ಸತಿ ವಿಷ್ಣುತಾನೆ । ಓವಿನೋವಿ ಮನದಲ್ಲಿ ಕಾವ ಕೃಷ್ಣ ಇರುತಿರೆ । ಆವಾಗಲೆಲ್ಲಿಹದಾವ ಭಯ ನಿನಗೆ ಜೀವಾ ॥ ೪ ॥

**ಏಕತಾಳ** ॥ ಕರಿ ಹರಿಯೆನಲಾ ಸುಪ್ತಿಯ ತಳ್ಳಿ । ಶಿರಿಯ ಸಾರೆನುತ ಉರಗಮಂಚದಿಂ ಧುಮುಕಿ । ಕರವಿತ್ತ ವಿರಿಂಚನ ಕೈಲಾಗವಲ್ಲದೆ । ಭರದಿ ಹನುಮನಿತ್ತ ಹಾವಿಗೆಯ ದಾಂಟದಾಗ । ಗರುಡನೊದಗುತಿರೆ । ತಿರುಗಿ ನೋಡದ ನಿನ್ನ ಕರುಣವ ತೋರೆನಗೆ ನಮೋ ನಮೋ ಶ್ರೀಕೃಷ್ಣ ॥ ೫ ॥

**ಜತೆ** ॥ ನಾರಾಯಣಯೆಂದು ಮಗನ ಕರೆಯುತಿರೆ ಎನ್ನ । ಕರೆದವರಾರೆಂದು ಅಂಜದಿರೆನುತಲಿ ಅಜಮಿಳಗೆ ಶ್ರೀಕೃಷ್ಣ ॥ ೬ ॥

## ೮. ನಾಮಸ್ಮರಣ ಸುಳಾದಿ.

**ಧ್ರುವತಾಳ** ॥ ದೇಹ ಜೀರ್ಣವಾಯಿತು ಧನದ । ಸ್ನೇಹ ಜೀರ್ಣವಾಗದು । ಕಣ್ಣು ಕಿವಿ ಮಂದವಾಯಿತು । ಹೆಣ್ಣು ಮಣ್ಣಿನಾಶೆಯು

ಮಂದವಾಗದು । ಕಾಲುಕೈ ಜವಗುಂದಿತು ಭೋಗವ । ಲೋಲತೆಯು ಮಂದವಾಗದು । ಜರೆ ರೋಗದಿಂದ ನೆರೆಹೊರೆ ಹೇಸಿತು । ಶರೀರದೊಳು ಹೇಸಿಕೆ ಇನಿತಿಲ್ಲ । ಪಾಪಕೋಟಿಗಳ ಮಾಡಿಹೆ । ಅನು । ತಾಪ ಮನದೊಳಿಳ್ಳನಿತಿಲ್ಲ । ಸಂದುಹೋಯಿತು ಕಾಲವೆಲ್ಲ । ಮುಂದಣ ಗತಿ ಗೈಯೆಣಿಕೆ ಇಲ್ಲ । ಅನಾದಿಯಿಂದ ನಾನಿನ್ನವನಾಗಿಹೆ । ಯೆನ್ನ ಕುಂದು ನಿನ್ನವಲ್ಲವೆ ಶ್ರೀಕೃಷ್ಣ । ಇನ್ನಾದರು ರತಿಯನಿತ್ತು ದಯದಿಂದ ಸಲಹಯ್ಯ ॥ ೧ ॥

**ರೂಪಕತಾಳ** ॥ ಹರಿನಾಮ ಹರಿಪಾದ ತೀರ್ಥವಿರಲು । ಹರಿದಾಸರ ಸೇವೆ ಸಂಗ ಸುಖವಿರಲು । ದುರಿತ ಭಯವೇಕೆ ನರಕದ ಭೀತಿಯೇಕೆ । ಕೇಸರಿ ಪಕ್ಕದೊಳಿರಲು ಕರಿಭಯವೇಕೆ । ದುರಿತ ತಮಕೆ ತರಣಿ ತಾನಲ್ಲವೆ । ಶ್ರೀಹರಿ ಶ್ರೀಕೃಷ್ಣನ ಸಂಬಂಧ ದುರಿತ ಭಯವೇಕೆ ನರಕದ ಭೀತಿಯೇಕೆ ॥ ೨ ॥

**ತ್ರಿಪುಟತಾಳ** ॥ ಯಮಕಿಂಕರರು ಭಯಂಕರವಾದಡೇನೂ । ಯಮಯಾತನದ ಬಟ್ಟೆ ಅತಿ ಕಷ್ಟವಾದಡೇನು । ಯಮಯಾತನೆ ಘೋರ ಅತಿ ತೀವ್ರವಾದಡೇನು । ಕಮಲನಾಭನ ಡಿಂಗರಿಗಂಜಿಕೆಯುಂಟೆ । ನಮೋ ನಮೋ ಶ್ರೀಕೃಷ್ಣಯೆಂದಂಜಿ ಓಡುವರು । ಯಮಭಟರು ತಮ್ಮಾಳ್ದನಾಜ್ಞೆಯಲೀ ॥ ೩ ॥

**ಅಟತಾಳ** ॥ ಆವನ ಚಿತ್ತ ಅಚ್ಯುತನ ನೆನೆಯದು । ಆವನ ತಲೆ ಬಲಿಬಂಧನಗೆರಗದು । ಆವನ ನಾಲಿಗೆ ಶ್ರೀಲೋಲನೆನ್ನದು । ಅನರಾಧಮ ನರಕ ಪತಿತ । ಶ್ರೀಕೃಷ್ಣನವರು ವೈಕುಂಠ ಪಥಿಕರೂ । ಆ ನರಾಧಮ ನರಕ ಪತಿತ ॥ ೪ ॥

**ಏಕತಾಳ** ॥ ಅಣಕದಿಂದಾಗಲಿ ಡಂಬದಿಂದಾಗಲಿ । ಸಂಗೀತದಿಂದಾಗಲಿ । ಪರಿಹಾಸ್ಯದಿಂದಾಗಲಿ । ಎದ್ದಾಗಲಿ ಯೆಡಹಿದಾಗಾಗಲಿ । ತಾಗುವಾಗ ಮತ್ತಾವಾಗಲಾಗಲಿ । ನಮೋ ನಮೋ ಶ್ರೀಕೃಷ್ಣ ಮುಕುತಿ ಕನ್ಯಾಮದುವೆ ವಾದ್ಯದ ಘೋಷಾ ॥ ೫ ॥

**ಜತೆ** ॥ ಸಂತತ ನಿನ್ನ ನಾಮವ ನೆನೆವರೆ । ಅಂತ್ಯಕಾಲದಲ್ಲಿ ವಿಶೇಷ ಕೊಡು ಕೃಷ್ಣ ॥ ೬ ॥ ಶ್ರೀಃ ॥

## ೯. ಉಪಾಸನಾ ಸುಳಾದಿ.

**ಧ್ರುವತಾಳ** ॥ ತಾಯಿ ಈ ಲೋಕಕ್ಕೆ ಶ್ರೀಹರಿ । ಕಾಯುದಿಂ ಜಗವಂ ಆದಿಯೊಳಿಟ್ಟನಾಗಿ । ತಂದೆ ಈ ಲೋಕಕೆ ಶ್ರೀಹರಿ । ಅಂದೆ ಬೊವ್ಮಾದಿಗಳ ಸೃಜಿಸಿದನಾಗಿ । ಒಡೆಯಾ ಈ ಲೋಕಕೆ ಶ್ರೀಹರಿ । ಬಿಡದೆ ರಾಮಾದಿ ರೂಪದಿಂ ಪೊರವನಾಗಿ । ಈಶಾ ಈ ಲೋಕಕೆ ಶ್ರೀಹರಿ । ವ್ಯಾಸಾದಿ ರೂಪದಿ ಜ್ಞಾನವನೀವನಾಗಿ । ಪರತತ್ವ ಈ ಲೋಕಕ್ಕೆ ಶ್ರೀಹರಿ । ವರ ಮುಕುತಿಯುನೊಬ್ಬನೀವನಾಗಿ । ಗತಿ ಈ ಲೋಕಕ್ಕೆ ಶ್ರೀಹರಿ । ಶ್ರೀಪತಿ ತನ್ನ ನೆನವರಿಗಭಯುವನೀವನಾಗಿ । ದೈವ ಈ ಲೋಕಕ್ಕೆ ಶ್ರೀಹರಿ । ಸೇವ್ಯನಾಗಿ ತಮ್ಮ ತಮ್ಮ ಧರ್ಮಗಳಿಂದ । ಸರ್ವ ಈ ಲೋಕಕ್ಕೆ ಶ್ರೀಹರಿ । ಶ್ರೀಕೃಷ್ಣನೋರ್ವನು ಸರ್ವವ್ಯಾಪಕನಾಗಿ । ತಾಯಿ ಈ ಲೋಕಕ್ಕೆ ಶ್ರೀಹರಿ ॥ ೧ ॥

**ಮಟ್ಟತಾಳ** ॥ ಪತಿಯೆಂದುಪಾಸ್ಯ ಪಯೋಧಿಸುತೆಗೆ । ಪಿತನೆಂದುಪಾಸ್ಯ ಪದುಮಜಂಗೆ । ಶ್ವಶುರನೆಂದುಪಾಸ್ಯ ಸರಸ್ವತಿಗೆ । ಪಿತಾಮಹನೆಂದುಪಾಸ್ಯ ಪಿನಾಕಧರಗೆ । ಸ್ವಾಮಿಯೆಂದುಪಾಸ್ಯ ಸರ್ವರಿಗೆ । ಶ್ರೀಕೃಷ್ಣ ಆ ಮಾಹಾತ್ಮ್ಯಗುಪಾಸ್ಯ ಉಗ್ರಸೇನ ಗಡಾ ॥ ೨ ॥

**ರೂಪಕತಾಳ** ॥ ಸರಸಿಜಾಕ್ಷನು ವಿರಂಚಿಗೆ ಗುರು । ಪುರಹರನಿಗೆ ಪರಮಗುರು । ವಿಕ್ಷಸುರತತಿಗೆಲ್ಲಾ ಆದಿಗುರು । ನರೋತ್ತಮರಿಂಗೆಲ್ಲ ಮೂಲಗುರು । ಪರದೈವ ಶ್ರೀಕೃಷ್ಣಗೆ ಗುರುವಾದಾ ಸಾಂದೀಪ ಗಡಾ ॥ ೩ ॥

**ಝಂಪೆತಾಳ** ॥ ಶೋಕಾದಿ ದೋಷ ಅತಿದೂರನೆಂಬಾ ಜ್ಞಾನೈಕ ರಸ ದಿವ್ಯ ಮೂರುತಿಯೆಂಬಾ । ಲೌಕಿಕಾನಂದಾ ಮಂದ ಸಾಂದ್ರವೆಂಬಾ । ಸಾಕುವದೀಯುನ್ನ ಸ್ವಾಮಿಯೆಂದೆಂಬ । ಈ ನಾಲ್ಕು ವಿಧದ ಉಪಾಸ್ಯವಿಲ್ಲದವಗೆ ಶ್ರೀಕೃಷ್ಣ ತನ್ನ ಮೂರುತಿಯ ತೋರ ॥ ೪ ॥

**ಏಕತಾಳ** ॥ ಎಡರುಗಳೆಲ್ಲವು ಅಡಸಿದಡಂ । ಪತ್ತುಗಳೆಲ್ಲವು ಒಡಿದಡಂ । ವ್ಯಾಧಿಗಳೆಲ್ಲವು ಬಾಧಿಸಿದಡಂ । ಶೋಕಗಳೆಲ್ಲವು ಮುಖ

ಗಟ್ಟಿದೊಡಂ । ಶ್ರೀಕೃಷ್ಣ ಪೂರ್ಣಗುಣ ಸ್ವಾಮಿಯೆಂಬ ಏಕಾಂತ ಉಪಾಸ್ಯ ಮರೆಯದಿರೆ ॥ ೫ ॥

ಜತೆ ॥ ಶ್ರವಣಾದಿಗಳೊಂದು ಕ್ಷಣವ ಬಿಡದೆ ಮಾಡು । ಭವ ರೋಗ ವೈದ್ಯ ಶ್ರೀಕೃಷ್ಣನ ಚಿತ್ತವ ಪಡೆವರೆ ॥ ೬ ॥ ಶ್ರೀ ॥

## ೧೦. ಕ್ಷಮಾಪನಾ ಸುಳಾದಿ.

**ಧ್ರುವತಾಳ** ॥ ಎನ್ನ ಮಹಾ ದೋಷಗಳು ಅನಂತವಾದಡೆ ಅಂಜೆನು ನಾ । ನಿನ್ನಯ ಕಲ್ಯಾಣ ಗುಣಗಳು ಅನಂತಾನಂತವಾಗೆ । ಎನ್ನಯ ಅನಾದಿ ತಪ್ಪುಗಳು । ಅನಂತಾನಂತವಾದಡೆ ಅಂಜೆನು ನಾನು । ನಿನ್ನಯ ಅಪಾರ ಮಹಿಮೆ ಅನಂತಾನಂತವಾಗೆ ಬಾ । ವನ್ನವಂ ಸಾರಿದಾ ಬೇವು ಬಾವನ್ನದಂತಿಪ್ಪುದಲ್ಲದೆ ಬೇವಹುದೆ । ತನ್ನಯಾ ಶಿಶುವಿನ ತಪ್ಪಿಗೆ ಜನನಿ ಕೈಬಿಡುವಳೆ । ನಿನ್ನವನು ನಾನೆಂದಡೆ ಇದೊಂದೆ ಸಾಲದೆ ದಯಾ । ಸಿಂಧು ಶಿರಿಪತಿ ಶಿರಿಕೃಷ್ಣ ನಿನ್ನವನು ನಾನೆಂದಡೆ ॥ ೧ ॥

**ಮಟ್ಟೆತಾಳ** ॥ ಹಿಂದಣಾ ಇಂದಿನಾ ಮುಂದಣದಂದ । ದಂದದ ಕರ್ಮಗಳು ಅನಂತಾನಂತವಾಗೆ । ಒಂದೊಂದನುಂಬ ಕಾಲದೊಳಗೆ । ಮ । ತ್ತೊಂದನಂತಾನಂತ ಕರ್ಮಗಳು ಕಾಡುತಲಿವೆ । ಒಂದೊಂದುಂಬಾ ಕಾಲದೊಳಗೆ । ತಂದೆ ಶ್ರೀಕೃಷ್ಣನ ಸಂದರುಶನವಲ್ಲದೆ ಈ । ದಂದುಗವನೀಗುವ ಬಗೆಯು ಬೇರುಂಟೆ । ಒಂದೊಂದುವುಂಬಾ ಕಾಲ ದೊಳಗೆ ॥ ೨ ॥

**ರೂಪಕತಾಳ** ॥ ಶ್ರುತಿಗಳು ಬಣ್ಣಿಸಿ ಬಣ್ಣಿಸಿ ಸ್ತುತಿಸಿ ಸ್ತುತಿಸಿ ದಣಿಯವೋ ನಿನ್ನ । ದಿತಿಸುತಾ ದೇಶದಿಂ ಸಭೆಯೊಳು । ಅತಿ ಅತಿ ಬಯ್ದ ಶಿಶುಪಾಲನಿಗೆ ಮು । ಕುತಿಯನಿತ್ತೆಂದಡೆ ನಿನ್ನ ಭಕತರಲಿ ನಿನ್ನ ದಯಕಿನ್ನು । ಮಿತಿಯುಂಟೆ ಶಿರಿಪತಿ ಶಿರಿಕೃಷ್ಣ ನಿನ್ನ ಭ । ಕತರಲಿ ನಿನ್ನ ದಯಕಿನ್ನು ಮಿತಿಯುಂಟೆ ॥ ೩ ॥

**ಅಟತಾಳ** ॥ ಆದ್ಯಾಪರಾಧ ಮಿಥ್ಯಾಜ್ಞಾನ ಅದ್ವಿತೀಯ ಹರಿ ವಿಸ್ಮರಣ । ಆಶ್ರುತಿಯ ವಿಹಿತಾಕರಣ ಅಹಿತಾಚರಣ । ಆ ಚತುರ್ಥ ಅಯೋಗ್ಯನಲ್ಲುಪದೇಶ । ಇಂತೀಯಪರಾಧಕ್ಕೆ । ನೀನೆನ್ನ ಕರುಣ ದಿಂದ ಕಾಯುಯ್ಯ ಶ್ರೀಕೃಷ್ಣ ಕರುಣದಿಂದ ಕಾಯುಯ್ಯ ॥ ೪ ॥

**ಏಕತಾಳ** ॥ ಭಕುತಿಲೇಶದ ಪ್ರಸಕ್ತಿ ಇಲ್ಲದ । ಜ್ಞಾನವೆಂಬುದ ಕಾಣೆನೂ । ಆಚಾರ ವಿಚಾರ ಮುನ್ನತಾನಿಲ್ಲ ಜ್ಞಾನವೆಂಬುದ ಕಾಣೆನೂ । ಆನೊಬ್ಬನೆ ಕೃಷ್ಣ ನಿನ್ನವರಲ್ಲಿಹ ಮಾನುಷ ವೇಷದ ಪಶುವಿದುಯೆಂದೆನ್ನ । ಕರುಣದಿಂದ ಕಾಯುಯ್ಯ ಶ್ರೀಕೃಷ್ಣ ಕರುಣದಿಂದ ಕಾಯುಯ್ಯ ॥ ೫ ॥

**ಜತೆ** ॥ ಮೆಚ್ಚಿದೆನು ಕೃಷ್ಣ ಅಚ್ಚಕರುಣಿಯೆಂದು ಯೆಮ್ಮ । ಯೆಚ್ಚರಿಗೆದೆಯುಲೊದಗಿದೆ । ಕರುಣಿಯೆಂದು ಮೆಚ್ಚಿದೆನೊ ಕೃಷ್ಣ ॥ ೬ ॥

॥ **ಶ್ರೀಮಧ್ವೇಶಾರ್ಪಣಮಸ್ತು** ॥

## ಶ್ರೀವ್ಯಾಸರಾಯರ ಸುಳಾದಿಗಳು ಸಂಪೂರ್ಣ.

॥ ಶ್ರೀಕೃಷ್ಣಾರ್ಪಣಮಸ್ತು ॥

## ಕೀರ್ತನೆ.

೬೮. ರಾಗ ನಾದನಾಮಕ್ರಿಯೆ, ಆದಿತಾಳ.

ನಮೋ ಪಾರ್ವತೀಪತಿ ನುತಜನ । ಪರ । ನಮೋ ವಿರೂಪಾಕ್ಷ ॥ ॥ ಪಲ್ಲ ॥ ರಮಾರಮಣನಲ್ಲ್ಯಮಲ ಭಕುತಿ ಕೊಡು ನಮೋ ನಮೋ ಕಮಲಾಕ್ಷಾ ॥ ಅನುಪಲ್ಲ ॥ ನೀಲಕಂಠ ತ್ರಿಶೂಲ ಡಮರು ಹಸ್ತಾಲಂಕೃತ ರಕ್ಷ । ಫಾಲನೇತ್ರ ಕಪಾಲ ರುಂಡ ಮಣಿಮಾಲಾ ಧೃತರಕ್ಷ ॥ ಶೀಲರಮ್ಯ ವಿಶಾಲನೇತ್ರ ಸಲ್ಲೀಲ ಸುರಾಧ್ಯಕ್ಷ । ಶ್ರೀಲಕುಮಿಶನ ಓಲೈಸುವ ಭಕ್ತಾವಳಿಗಳ ಪಕ್ಷ ॥ ೧ ॥ ವಾಸವನುತ ಹರಿದಾಸ ದಾಸ ಕೈಲಾಸವಾಸ ದೇವ । ದಾಶರಥಿ ಓಪಾಸಕ ಸುಜನರ

ಪೋಷಿಸುವ ಪ್ರಭಾವಾ ॥ ಭಾಷಿಸುತಿಹವಶೇಷ ಜೀವಂಗೆ ಈಶನೆಂಬ ಭಾವ । ಶ್ರೀಶನಲಿ ಕೀಲಿಸು ಮನವ ಗಿರಿಜೇಶ ಮಹಾದೇವಾ ॥ ೨ ॥ ಮೃತ್ಯುಂಜಯನ ಉತ್ತಮಪದಯುಗ ಭೃತ್ಯವೆ ಸರ್ವತ್ರ । ಹತ್ತಿಗರೆದು ಆಪತ್ತಿರಂದದಿ ಪೊರೆವುತಿಹದು ತ್ರಿನೇತ್ರ ॥ ತ್ರೆತ್ರನಂತೆ ಕಾಯುತ್ತಿಹ ಬಾಣನ ಸತ್ಯವೆ ಸುಚರಿತ್ರ । ಕರ್ತೃ ಉಡುಪಿ ಸರ್ವೋತ್ತಮ ಕೃಷ್ಣನ ಪವಿತ್ರ ಕೃಪಾಪಾತ್ರಾ ॥ ೩ ॥ ಶ್ರೀ ॥

॥ ಶ್ರೀಮಧ್ವೇಶಾರ್ಪಣಮಸ್ತು ॥



ಈ ಪುಸ್ತಕವು

ಪಾವಂಜೆ ಗುರುರಾವ್, ಇವರ

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟು,

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯದಿಂದ ಪ್ರಕಟಿಸಲ್ಪಟ್ಟಿತು.

ಶಾಲೀವಾಹನಶಕ ೧೮೪೬.

1924.

